ಪ್ರಚಾರ ಪುಸ್ತಕ ಮಾಲೆ

41

# ನಯಸೇನ

ಜಿ. ವೆಂಕಟಸುಬ್ಬಯ್ಯ



# ಕೆಲವು ಸಾಹಿತ್ಯ ಕೃತಿಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞ ಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯಿ
೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ

ಪ್ರಚಾರ ಪುಸ್ತಕಮಾಲೆ-೪೧

# ನಯಸೇನ

ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.



೧೯೯೫

ಮೊದಲನೆಯ ಮುದ್ರಣ ೧೯೪೨
ಎರಡನೆಯ ಮುದ್ರಣ ೧೯೫೬
ಮೂರನೆಯ ಮುದ್ರಣ ೧೯೬೬
ನಾಲ್ಕನೆಯ ಮುದ್ರಣ ೧೯೭೪
ಐದನೆಯ ಮುದ್ರಣ ೧೯೯೫
೫,೦೦೦ ಪ್ರತಿಗಳು



**ಬೆಲೆ : ರೂ. ೧-೦೦**

ಪ್ರಕಾಶಕರು :
ನಿರ್ದೇಶಕರು, ಪ್ರಸಾರಾಂಗ
ಮಾನಸಗಂಗೋತ್ರಿ, ಮೈಸೂರು–೫೭೦೦೦೬

ಮುದ್ರಕರು :
ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು–೫೭೦೧೦೬

# ಮುನ್ನುಡಿ

ಈ ಪ್ರಚಾರ ಪುಸ್ತಕಮಾಲೆ ಮೂರು ವರ್ಷಗಳ ಹಿಂದೆ ಪ್ರಾರಂಭವಾಯಿತು. ಅತಿ ಸುಲಭವಾದ ಬೆಲೆಯಿಟ್ಟು ಇಂಥ ಪುಟ್ಟ ಪುಸ್ತಕಗಳನ್ನು ಹೊರಡಿಸಿದರೆ, ಅದನ್ನು ಓದಿ ಮೆಚ್ಚುವವರು ಮೈಸೂರಿನ ಜನರಲ್ಲಿ ಬಹುವಾಗಿ ದೊರೆಯುವರೆಂಬ ಭರವಸೆಯೇ ಈ ಪ್ರಯತ್ನಕ್ಕೆ ಪ್ರೇರಕ. ಮೊಟ್ಟಮೊದಲು ಮೈಸೂರು ವಿಶ್ವವಿದ್ಯಾನಿಲಯ ಕೈಕೊಂಡ ಈ ಹೊಸ ಮಾರ್ಗದ ಉದ್ಯಮವು ಅದನ್ನು ಏರ್ಪಡಿಸಿದವರ ಅತ್ಯಂತ ನಿರೀಕ್ಷೆಯನ್ನೂ ಮೀರಿ ಫಲಕಾರಿಯಾಗಿದೆಯೆಂದು ದಿಟವಾಗಿ ಹೇಳಬಹುದು. ಈ ಮೂರು ವರ್ಷಗಳಲ್ಲಿ ೩೪ ಪುಸ್ತಕಗಳು ಪ್ರಕಟವಾಗಿವೆ. ಇವುಗಳಲ್ಲಿ ೧೨ ಸಾಹಿತ್ಯಕ್ಕೆ ಸಂಬಂಧಪಟ್ಟವು; ೧೧ ಭೌತ ಮತ್ತು ಜೀವವಿಜ್ಞಾನಗಳನ್ನು ಕುರಿತವು; ಉಳಿದವನ್ನು ಸಾಮಾಜಿಕಶಾಸ್ತ್ರಗಳ ಗುಂಪಿಗೆ ಸೇರಿಸಬಹುದು. ಇವುಗಳ ವಿಷಯ ಕ್ಷೇತ್ರವು ವಿಶಾಲವಾದದ್ದು. ಕನ್ನಡದ ವಿಚಾರದಲ್ಲಿ ಯಾರ ಮಾತಿಗೆ ಮನ್ನಣೆಯಿದೆಯೋ ಅಂಥ ಮಹನೀಯರು ಈ ಪುಸ್ತಕಗಳನ್ನು ಅತ್ಯುತ್ಸಾಹದಿಂದ ಬರಮಾಡಿಕೊಂಡಿದ್ದಾರೆ. ಈ ಮಾಲೆಯಲ್ಲಿ ಹೊಸದೊಂದು ಪುಸ್ತಕ ಹೊರಬಿದ್ದ ದಿನವೇ ಸುಮಾರು ೬೦೦ ಪ್ರತಿಗಳು ಮಾರಾಟವಾಗುತ್ತವೆ; ಈ ಮೂರು ವರ್ಷಗಳ ಅವಧಿಯಲ್ಲಿ ಸುಮಾರು ೬೦,೦೦೦ ಪ್ರತಿಗಳು ವಿಕ್ರಯವಾಗಿವೆ. ಈ ಪುಸ್ತಕಮಾಲೆಯನ್ನು ಪ್ರಾರಂಭಿಸಿದವರು ಮೈಸೂರು ವಿಶ್ವವಿದ್ಯಾನಿಲಯದ ವೈಸ್‌-ಛಾನ್ಸಲರ್ ಪದವಿಯಿಂದ ಈಗತಾನೆ ವಿಶ್ರಾಂತಿ ಪಡೆದಿರುವ ರಾಜಕಾರ್ಯ ಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾಯರು; ಇದು ಯುಕ್ತ

ವಾಗಿಯೇ ಇಷ್ಟೊಂದು ಜನಪ್ರಿಯವಾಗಿರುವುದನ್ನು ನೋಡಿ ಅವರಿಗೆ ತುಂಬ ತೃಪ್ತಿಯುಂಟಾಗಿರಬೇಕು. ಈ ಪುಸ್ತಕಗಳನ್ನು ಯಾವ ಪ್ರತಿಫಲವೂ ಇಲ್ಲದೆ ಬರೆದುಕೊಟ್ಟಿರುವ ಗ್ರಂಥಕರ್ತರಿಗೆ ಮೈಸೂರು ವಿಶ್ವವಿದ್ಯಾನಿಲಯದ ವಂದನೆಗಳು ಸಲ್ಲಬೇಕಾಗಿವೆ. ಈ ಮಾತುಗಳನ್ನು ಮುಗಿಸುವುದಕ್ಕೆ ಮುಂಚೆ ಈ ಮಾಲೆಯ ಪ್ರಧಾನ ಸಂಪಾದಕರಾದ ಶ್ರೀಮಾನ್ ಜಿ. ಹನುಮಂತರಾಯರನ್ನು ಕುರಿತು ಮೆಚ್ಚಿಕೆಯ ಮಾತೊಂದನ್ನು ನಾನು ಆಡದಿದ್ದರೆ ಲೋಪವಾದೀತು. ಸಂಪಾದಕ ಕಾರ್ಯದಲ್ಲಿ ಇವರು ಸಲ್ಲಿಸಿರುವ ಕಾಲ, ಶಕ್ತಿ, ಶ್ರದ್ಧೆ ಇವು ಎಷ್ಟೆಂಬುದು ಅವರ ದುಡಿಮೆಯನ್ನು ಹತ್ತಿರದಿಂದ ನೋಡಿದವರಿಗೆ ಮಾತ್ರ ಗೊತ್ತಾಗಬಲ್ಲದು. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆ ಇಂದಿನಂತೆಯೇ ಮುಂದೆಯೂ ಬಹುಕಾಲ ಜನಪ್ರಿಯವಾಗಿ ನಿಲ್ಲಲೆಂದು ಹಾರೈಸುತ್ತೇನೆ.

ಮೈಸೂರು
ತಾ|| ೨೪-೪-೧೯೪೨

ಇ. ಜಿ. ಮೆಕಾಲ್ಪೈನ್
ವೈಸ್-ಛಾನ್ಸಲರ್

# ಅರಿಕೆ

ಕಳೆದ ಬೇಸಗೆಯಲ್ಲಿ ಚಿಕ್ಕಮಗಳೂರು, ಚಳ್ಳಕೆರೆಗಳಲ್ಲಿ ನಾನು ಕೊಟ್ಟ ಎರಡು ಉಪನ್ಯಾಸಗಳನ್ನು ವಿಸ್ತರಿಸಿ ಈ ಪ್ರಬಂಧವನ್ನು ಬರೆದಿದ್ದೇನೆ. ಶ್ರೀಮಾನ್ ಜಿ. ಹನುಮಂತರಾಯರ ಪ್ರೋತ್ಸಾಹವೂ, ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ ಮತ್ತು ಶ್ರೀಮಾನ್ ಟಿ. ಎನ್. ಶ್ರೀಕಂಠಯ್ಯ ಇವರ ಸಲಹೆಗಳೂ ಇಲ್ಲದಿದ್ದರೆ ನನ್ನ ಉಪನ್ಯಾಸಗಳು ಈ ರೂಪವನ್ನು ತಾಳುತ್ತಿರಲಿಲ್ಲ. ಮೊದಲಿನ ಹಸ್ತಪ್ರತಿಯನ್ನು ಸಿದ್ಧಮಾಡುವುದರಲ್ಲಿ ಶ್ರೀಮಾನ್ ಎನ್. ಎಸ್. ರಾಮಸ್ವಾಮಿ ಐಯ್ಯರ್ ಅವರು ನನಗೆ ನೆರವಾದರು. ಇವರೆಲ್ಲರಿಗೂ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಮಹಾರಾಜಾ ಕಾಲೇಜು, ಮೈಸೂರು — ಜಿ. ವೆಂ.

೧೪-೮-೧೯೪೨

# ವಿಷಯಸೂಚಿಕೆ

## ೧. ಪೀಠಿಕೆ

ಕಥೆಗಳನ್ನು ಕೇಳುವ ಕುತೂಹಲ ಮಾನವನ ಹುಟ್ಟುಗುಣ. ಅಜ್ಜಿ ಹೇಳುವ ಅಚ್ಚರಿಯ ಕಥೆಗಳಿಂದ ಮಕ್ಕಳ ವಿದ್ಯಾಭ್ಯಾಸ ಮೊದಲಾಗುತ್ತದೆ. ಮಕ್ಕಳಿಗೆ ಕಥೆ ಹೇಳಬೇಕೆಂದರೆ ಅಜ್ಜಿಗೂ ಅಷ್ಟೇ ಅಭಿಲಾಷೆ. ಈ ಕಥೆ ಹೇಳುವ ಕೇಳುವ ಅಭಿರುಚಿ ಬೆಳೆದ ಹಾಗೆಲ್ಲಾ ಕಥನಸಾಹಿತ್ಯ ಹೆಚ್ಚುತ್ತದೆ. ಕನ್ನಡದಲ್ಲಿ ಕಥನಸಾಹಿತ್ಯ ಯಾವಾಗ ಮೊದಲಾಯಿತೆಂದು ಹೇಳುವುದು ಕಷ್ಟ. ಇಲ್ಲಿಯವರೆಗೆ ದೊರೆತಿರುವ ಕನ್ನಡ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದ ನೃಪತುಂಗನ 'ಕವಿರಾಜಮಾರ್ಗ' (ಕ್ರಿ.ಶ ೮೧೪-೮೭೭) ದಿಂದ ಅದಕ್ಕಿಂತಲೂ ಹಿಂದೆ ಕನ್ನಡದಲ್ಲಿ 'ಗದ್ಯಕಥೆ'ಗಳಿದ್ದುವೆಂದು ಗೊತ್ತಾಗುತ್ತದೆ. 'ವಡ್ಡಾರಾಧನೆ' ಎಂಬ ಒಂದು ಜೈನ ಕಥೆಗಳ ಪುಸ್ತಕವೂ ಸಿಕ್ಕಿದೆ. ಆದುದರಿಂದ ಕನ್ನಡಕ್ಕೆ ಕಥನಕಲೆ ಬಹಳ ಹಳೆಯದೆಂದು ಹೇಳಬಹುದು. ಆದರೆ 'ವಡ್ಡಾರಾಧನೆ'ಯಾದ ಮೇಲೆ ಈ ರೀತಿಯ ಗ್ರಂಥಗಳೇ ಸಿಕ್ಕಿಲ್ಲ. ಇಂತಹ ಕಥೆಗಳನ್ನು ಮತ ಪ್ರಚಾರಕ್ಕೆ ಉಪಯೋಗಿಸಿಕೊಂಡು ಅವುಗಳಿಗೆ ಮೊದಲು ಜೀವಕಳೆಯನ್ನು ತುಂಬಿ ಕಳಕಳಿಸುವಂತೆ ಮಾಡಿದವನು ನಯಸೇನ. ಇವನ 'ಧರ್ಮಾಮೃತ'ವನ್ನು ಸವಿಯುವುದಕ್ಕೆ ಪೀಠಿಕೆಯಾಗಿ ಕೆಲವು ವಿಷಯಗಳನ್ನು ತಿಳಿದುಕೊಳ್ಳುವುದು ಅವಶ್ಯಕ.

ಸುಮಾರು ಕ್ರಿಸ್ತಪೂರ್ವ ಮೂರನೆಯ ಶತಮಾನದಲ್ಲಿ ಭದ್ರಬಾಹು ಮುನಿಗಳು ದಕ್ಷಿಣ ದೇಶಕ್ಕೆ ಬಂದಾಗಿನಿಂದ ಕರ್ನಾಟಕದಲ್ಲಿ ಜೈನಮತವು ಪ್ರಸಿದ್ಧವಾಗಿದೆ. ಮತಪ್ರಚಾರಕ್ಕೆ ಜನಸಾಮಾನ್ಯರ ಭಾಷೆಯೇ ಅತ್ಯುತ್ತಮ ಸಾಧನವೆಂಬುದನ್ನರಿತು

ಜೈನರು ಕನ್ನಡದಲ್ಲಿಯೂ ಗ್ರಂಥರಚನೆ ಮಾಡಿದರು. ಜೈನರು ನೆಲಸಿದ ಕಡೆಯಲ್ಲೆಲ್ಲಾ ಸಾಹಿತ್ಯವೂ ವಿದ್ವತ್ತೂ ಉತ್ತೇಜನ ಹೊಂದಿದವು. ನಮಗೆ ತಿಳಿದು ಬಂದಿರುವಮಟ್ಟಿಗೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮೊದಲು ಕೆಲಸ ಮಾಡಿದವರು ಜೈನರು. ಅವರು ಬರೆದ ಗ್ರಂಥಗಳಲ್ಲಿ ಕೆಲವು ಇಂದಿಗೂ ಕನ್ನಡ ಸಾಹಿತ್ಯದ ರತ್ನಗಳಾಗಿವೆ.

ಜೈನರು ಯಾವ ಧರ್ಮಕಥೆಯನ್ನು ಬರೆದರೂ ಅದರಲ್ಲಿ ಸ್ವಲ್ಪ ಭಾಗವನ್ನಾದರೂ ಜೈನಮತಧರ್ಮದ ಬೋಧೆಗೆ ಮೀಸಲಾಗಿಡುತ್ತಿದ್ದರು. ತಮ್ಮ ಮತವನ್ನು ಹರಡಬೇಕೆಂಬ ಅಭಿಲಾಷೆಯೇ ಇದಕ್ಕೆ ಕಾರಣ. ಪಂಪನ 'ಆದಿಪುರಾಣ' ಮೊದಲ್ಗೊಂಡು ಅನೇಕ ಪುರಾಣಗಳು ಕನ್ನಡದಲ್ಲಿ ರಚಿತವಾದವು. 'ತ್ರಿಷಷ್ಟಿಶಲಾಕಾಪುರುಷಪುರಾಣ' ಎಂಬ ಹೆಸರಿನ ಅರವತ್ತು ಮೂವರು ಮಹಾಪುರುಷರ ಜೀವನ ಚರಿತ್ರೆಗಳು ಅವರಿಗೆ ಬಹಳ ಮುಖ್ಯವಾದುವು[1] ಇವನ್ನು ದಿಗಂಬರರು 'ಪುರಾಣ'ಗಳೆಂದು ಕರೆಯುತ್ತಾರೆ; ಶ್ವೇತಾಂಬರರು 'ಚರಿತೆ'ಗಳು ಎಂದು ಕರೆಯುತ್ತಾರೆ. ಕರ್ಣಾಟಕ ದೇಶದಲ್ಲಿರುವುದು ದಿಗಂಬರ ಜೈನಮತ ಮಾತ್ರ. ಇಲ್ಲಿ ಶ್ವೇತಾಂಬರ ಪಕ್ಷವು ಪ್ರಚಾರಕ್ಕೆ ಬರಲಿಲ್ಲ.

ಮೇಲೆ ಹೇಳಿದ ಕನ್ನಡ ಪುರಾಣಗಳಿಗೆ ಸಂಸ್ಕೃತ ಅಥವಾ ಪ್ರಾಕೃತ ಗ್ರಂಥಗಳೇ ಆಧಾರ. ಮೊದಲನೆಯ ಅಮೋಘವರ್ಷ (ಕ್ರಿ.ಶ. ೮೧೪-೮೭೭)ನ ಕಾಲದಲ್ಲಿ ಜಿನಸೇನನೆಂಬುವನು 'ಮಹಾ

---

1 ಇವರಲ್ಲಿ: ೨೪ ಜನ ತೀರ್ಥಂಕರರು ಮತ್ತು ಅವರ ಸಮಕಾಲಿಕರಾದ ೧೨ ಜನ ಚಕ್ರವರ್ತಿಗಳು, ೯ ಜನ ಬಲದೇವರು, ೯ ಜನ ವಾಸುದೇವರು ಮತ್ತು ೯ ಜನ ಪ್ರತಿವಾಸುದೇವರು ಇವರ ಚರಿತ್ರೆಗಳು ವಿವರಿಸಲ್ಪಟ್ಟಿವೆ.

ಪುರಾಣ'ವೆಂದು ಪ್ರಸಿದ್ಧವಾಗಿರುವ 'ತ್ರಿಷಷ್ಟಿಶಲಾಕಾಪುರುಷ ಪುರಾಣ'ವನ್ನು ಪ್ರಾರಂಭ ಮಾಡಿದನು. ಈ ಪುಸ್ತಕದ ಮೊದಲನೆಯ ಭಾಗದ ಕೊನೆಯ ಸ್ವಲ್ಪವನ್ನೂ, ಎರಡನೆಯ ಭಾಗವನ್ನೂ ಜಿನಸೇನನ ಶಿಷ್ಯನಾದ ಗುಣಭದ್ರನು ಬರೆದು ಪೂರೈಸಿದನು. ಇದರ ಮೊದಲನೆಯ ಭಾಗವಾದ 'ಪೂರ್ವಪುರಾಣ'ದಲ್ಲಿ ಮೊದಲನೆಯ ತೀರ್ಥಂಕರನಾದ 'ಋಷಭ'ನ ಚರಿತ್ರೆಯು ವಿಸ್ತೃತವಾಗಿದೆ. ಎರಡನೆಯ ಭಾಗವಾದ 'ಉತ್ತರಪುರಾಣ'ದಲ್ಲಿ ಮಿಕ್ಕ ಮಹಾಪುರುಷರ ಚರಿತ್ರೆಗಳನ್ನು ಹೇಳಿದೆ. ಈ ಪುರಾಣದಲ್ಲಿ ಈ ಮಹಾಪುರುಷರ ಜನ್ಮಾವಳಿಗಳು, ಅವರ ಬಂಧುಗಳ ಜನ್ಮಾವಳಿಗಳು, ಇತರ ಅನೇಕ ಕಥೆಗಳು, ಜೈನಧರ್ಮಪ್ರತಿಪಾದನೆ ಮುಂತಾದ ಅನೇಕ ವಿಷಯಗಳು ಕಂಡುಬರುತ್ತವೆ. ಸಂಕ್ಷೇಪವಾಗಿ ಹೇಳುವುದಾದರೆ ವೈದಿಕ ಇತಿಹಾಸಗಳಂತೆ ಇದೂ ಒಂದು ಸಕಲ ವಿಷಯ ಪರಿಪೂರ್ಣವಾದ ಇತಿಹಾಸ. ಈ ಗ್ರಂಥವು ಕನ್ನಡ ಕವಿಗಳಿಗೆ ತಾವು ಬಯಸಿದ ಮಣಿಯನ್ನು ಆರಿಸಿಕೊಳ್ಳಬಹುದಾದ ಗಣಿಯಾಯಿತು. ಪಂಪನು ಪೂರ್ವಪುರಾಣವನ್ನು ಸಂಗ್ರಹಿಸಿ ತನ್ನ ಆದಿಪುರಾಣವನ್ನು ಬರೆದನು. ಅವನು ಅನೇಕ ನೀರಸವಾದ ಭಾಗಗಳೆಲ್ಲವನ್ನೂ ಬಿಟ್ಟು ತನ್ನ ಪ್ರತಿಭೆಯ ಸಹಾಯದಿಂದ ಆದಿಪುರಾಣವನ್ನು ಒಂದು ಉತ್ತಮ ಕಾವ್ಯ ವನ್ನಾಗಿ ಮಾಡಿದ್ದಾನೆ. ಇತರ ಕವಿಗಳು ತಮತಮಗೆ ಬೇಕಾದ ತೀರ್ಥಂಕರನ ಜೀವನಚರಿತ್ರೆಯನ್ನು ಆರಿಸಿಕೊಂಡು ಕನ್ನಡದಲ್ಲಿ ಪುರಾಣಗಳನ್ನು ಬರೆದರು.

ಆದರೆ ಈ ಪುರಾಣಗಳಲ್ಲಿ ಕವಿಗಳು ಸಂಸ್ಕೃತ ಮಹಾಕಾವ್ಯ ಶೈಲಿಯನ್ನು ಅನುಸರಿಸಿದ್ದರಿಂದ ಇವು ಹೆಚ್ಚಾಗಿ ಪಂಡಿತ ರಂಜಕ

ವಾದವು. ದೀರ್ಘವಾದ ಸಮಾಸಗಳು, ಶ್ಲೇಷೆ ಮುಂತಾದ ಕ್ಲಿಷ್ಟವಾದ ಅಲಂಕಾರಗಳು, ಅಷ್ಟಾದಶ ವರ್ಣನೆಗಳು, ಕಠಿಣ ವಾದ ಭಾಷೆ, ಧರ್ಮವನ್ನು ಪ್ರತಿಪಾದಿಸುವ ಪ್ರೌಢವಾದ ರೀತಿ ಇವೇ ಮುಂತಾದ ಕಾರಣಗಳಿಂದ ಇವು ಜನಸಾಮಾನ್ಯರ ಕುತೂಹಲವನ್ನು ತೃಪ್ತಿಪಡಿಸುವುದು ಸಾಧ್ಯವಾಗಲಿಲ್ಲ. ಈ ವಿಚಾರವನ್ನು ಕವಿಗಳು ಮನಸ್ಸಿಗೆ ತಂದುಕೊಳ್ಳಬೇಕಾದರೆ ಬಹಳ ಕಾಲ ಹಿಡಿಯಿತು. ಹನ್ನೆರಡನೆಯ ಶತಮಾನದ ಆದಿ ಭಾಗದಲ್ಲಿ ಕವಿಗಳು ಈ ತೊಂದರೆಯನ್ನು ಗಮನಿಸಿದ ಹಾಗೆ ಕಂಡುಬರುತ್ತದೆ. ಇವರಿಗೆ ಮೊದಲಿಗನಾಗಿ ಮಾರ್ಗದರ್ಶಕನಾದ ಕೀರ್ತಿ ನಯಸೇನನಿಗೆ ಸೇರತಕ್ಕದ್ದು.

ಪಾಮರ ರಂಜನೆಗಾಗಿ ಕಥಾಸಾಹಿತ್ಯವನ್ನು ಹೆಚ್ಚು ಹೆಚ್ಚಾಗಿ ಉಪಯೋಗಿಸಲು ಬಯಸಿ ವೈದಿಕ ಮತ್ತು ಬೌದ್ಧ ಮತ ಗ್ರಂಥಗಳಲ್ಲಿ ಕಾಣುವ ಕಥೆಗಳನ್ನು ಜೈನರು ತಮ್ಮದನ್ನಾಗಿ ಮಾಡಿಕೊಂಡರು. ಇದರಿಂದ ಜನರಿಗೆ ತಮ್ಮಲ್ಲಿ ಬಳಕೆಯಾಗಿದ್ದ ಕಥೆಯೂ ಸಿಕ್ಕಿದ ಹಾಗಾಯಿತು, ಜೊತೆಗೆ ಜೈನಮತ ಪ್ರಚಾರ ವಾದ ಹಾಗೂ ಆಯಿತು. ಹೀಗಾಗಿ ಹರಿವಂಶದ ಕಥೆಗಳು ೨೨ನೆಯ ತೀರ್ಥಂಕರನಾದ ನೇಮಿನಾಥನ ಚರಿತ್ರೆಯಲ್ಲಿ ಸೇರಿ ಹೋದುವು ಗಂಗಾವತರಣದ ಕಥೆ, ಸಗರ ಕುಮಾರರ ಕಥೆ, ಬೌದ್ಧರಲ್ಲಿ ಪ್ರಚಾರದಲ್ಲಿರುವ ಕಿಸಾಗೋತಮಿಯ ಕಥೆ, ಇವೆಲ್ಲವೂ ವ್ಯತ್ಯಾಸ ಹೊಂದಿ ಜೈನ ಕಥೆಗಳಾದುವು ಪಂಚತಂತ್ರ, ಬೃಹತ್ಕಥೆ, ಜಾತಕ ಕಥೆಗಳೂ ಕೂಡ ಜೈನ ರೂಪಾಂತರ ವನ್ನು ಪಡೆದುವು. ರಾಮಾಯಣ ಮಹಾಭಾರತಗಳಿಗೆ ಪ್ರತಿ ಯಾಗಿ ಜೈನಮಾರ್ಗದ ರಾಮಾಯಣ ಮಹಾಭಾರತಗಳ ರಚನೆಯೂ ಆಯಿತು. ರಾಮಾಯಣದ ರಾವಣನನ್ನು

ಪರಾಕ್ರಮಶಾಲಿಯಾದ ಉತ್ತಮ ಶ್ರಾವಕನನ್ನಾಗಿ ಜೈನರು ಮಾರ್ಪಡಿಸಿದರು. ಭಾರತದಲ್ಲಿ ಕೌರವನೂ ಕರ್ಣನೂ ಜೈನ ಮತಕ್ಕೆ ಸೇರಿದವರು. ಕೊನೆಗೆ ಪಾಂಡವರೂ ಸನ್ಯಾಸಿಗಳಾಗಿ ಮೋಕ್ಷಸಂಪಾದನೆ ಮಾಡುತ್ತಾರೆ.

ಜೈನ ಕಥಾಕೋಶವು ಇಷ್ಟಕ್ಕೆ ಮುಗಿಯಲಿಲ್ಲ. ಮಹಾವೀರನ ಶಿಷ್ಯರಾಗಿದ್ದು ಸದ್ಗತಿಯನ್ನು ಗಳಿಸಿದ ಮಹಾಪುರುಷರ ಕಥೆಗಳೂ ಅನೇಕವಿವೆ. ಇದಲ್ಲದೆ ಸಂಸ್ಕೃತ ಪ್ರಾಕೃತಗಳಲ್ಲಿ ಇಂತಹ ಕಥೆಗಳನ್ನೊಳಗೊಂಡ ಅನೇಕ ಗ್ರಂಥಗಳಿವೆ. ಇವುಗಳಲ್ಲಿ ಪ್ರಪಂಚದ ಕಥಾಸಾಹಿತ್ಯದಲ್ಲಿ ಕಂಡುಬರುವ ಅನೇಕ ಕಥೆಗಳಿಗೆ ಸಾಮ್ಯಗಳು ಕಂಡುಬರುತ್ತವೆ. ಜೈನಮತ ಪ್ರಚಾರವು ಪ್ರಾರಂಭವಾದಂದಿನಿಂದ ಜನಸಾಮಾನ್ಯರ ತಿಳುವಳಿಕೆಯಲ್ಲಿದ್ದ ಪ್ರತಿಯೊಬ್ಬ ಪೌರಾಣಿಕ ಮಹಾಪುರುಷನನ್ನೂ ತಮ್ಮವರನ್ನಾಗಿ ಮಾರ್ಪಡಿಸಿಕೊಳ್ಳಲು ಜೈನರು ಹವಣಿಸಿದರು.[1] ರಾಜಕಾರಣಪಟುವಾದ ಚಾಣಕ್ಯನನ್ನೂ ಅವರು ಜೈನನನ್ನಾಗಿ ಮಾಡಿದ್ದಾರೆ. ಈ ಎಲ್ಲ ಕಥೆಗಳ ಸಹಾಯದಿಂದ ಅವರು ತಮ್ಮ ಮತಧರ್ಮಗಳನ್ನು ಜನರಲ್ಲಿ ಪ್ರಚಾರ ಮಾಡಿದರು. ಕನ್ನಡದಲ್ಲಿ ಈ ಕೆಲಸ ಆರಂಭವಾದದ್ದು 'ವಡ್ಡಾರಾಧನೆ'ಯಲ್ಲಿ ಕಂಡುಬಂದರೂ ಅದಕ್ಕೆ ಕಳೆ ಉಂಟಾಗಿರುವುದು ನಯಸೇನನಿಂದ ಎಂದು ಹೇಳಬಹುದು.

---

1 ಈ ವಿಷಯದಲ್ಲಿ ಹೆಚ್ಚು ವಿಷಯವನ್ನು ತಿಳಿಯಬೇಕೆನ್ನುವವರು ವಿಂಟರ್‌ನಿಟ್ಜ್ ಅವರ 'History of Indian Literature' ಎಂಬ ಗ್ರಂಥವನ್ನು ನೋಡಬೇಕು. Vol, II, page 486.

## ೨. ನಯಸೇನ

'ಧರ್ಮಾಮೃತ'ವನ್ನು[1] ರಚಿಸಿದ ನಯಸೇನನು ಧಾರವಾಡ ಜಿಲ್ಲೆಯಲ್ಲಿರುವ 'ಮುಳಗುಂದ' ಎಂಬ ಊರಿನಲ್ಲಿದ್ದವನು. ಅದನ್ನು ಬರೆದಾಗ ಕವಿ ಪ್ರಾಯಃಶಃ ಸಂನ್ಯಾಸಿಯಾಗಿದ್ದಿರಬೇಕೆಂಬುದಕ್ಕೆ ಅವನ ಗ್ರಂಥದಲ್ಲಿಯೇ ಆಧಾರವಿದೆ. ಇಷ್ಟು ಹೊರತು ಇವನ ತಂದೆ, ತಾಯಿ, ಆಶ್ರಯದಾತ ಮುಂತಾದವರ ವಿಚಾರದಲ್ಲಿ ಅವನು ಏನನ್ನೂ ಹೇಳಿಲ್ಲ. ಇದನ್ನು ನೋಡಿದರೆ ಅವನು ಯಾವ ರಾಜನ ಆಶ್ರಯದಲ್ಲೂ ಇದ್ದಂತೆ ಕಂಡುಬರುವುದಿಲ್ಲ. ತನ್ನನ್ನು 'ನಯಸೇನ' 'ನಯಸೇನದೇವ' 'ನಯಸೇನಮುನೀಂದ್ರ' ಎಂದು ವಿವಿಧವಾಗಿ ಕರೆದುಕೊಂಡಿದ್ದಾನೆ. ಈತನಿಗೆ "ಸುಕವಿನಿಕರ ಪಿಕ ಮಾಕಂದ", "ವಾತ್ಸಲ್ಯ ರತ್ನಾಕರ", "ಸುಕವಿಜನಮನಃಪದ್ಮಿನೀರಾಜಹಂಸ", "ನೂತ್ನ ಕವಿತಾವಿಳಾಸ" ಎಂಬ ಬಿರುದುಗಳಿದ್ದಂತೆ ಇವನ ಗ್ರಂಥದಿಂದಲೇ ವ್ಯಕ್ತವಾಗುತ್ತದೆ.

"ಗುಣಿಶಿಖಿ ವಾಯುಮಾರ್ಗ ಶಶಿಸಂಖ್ಯೆಯೊಳಾವಗಮೊಂದಿ ವರ್ತಿ
ಸುತ್ತಿರೆ ಶಕಕಾಲಮುನ್ನತಿಯ ನಂದನ ವತ್ಸರದೊಳ್ ...."

ತನ್ನ 'ಧರ್ಮಾಮೃತ'ವನ್ನು ಮುಗಿಸಿದೆನೆಂದು ಅವನೇ ಹೇಳಿರುವುದರಿಂದ ಈ ಗ್ರಂಥವು ಕ್ರಿ. ಶ. ೧೧೧೨ನೆಯ ಇಸವಿಯಲ್ಲಿ ರಚಿತವಾಯಿತು ಎಂದು ಹೇಳಬಹುದು.

---

1 ಈ ಗ್ರಂಥವೊಂದೇ ಅಲ್ಲದೆ ನಯಸೇನನು ಕನ್ನಡದಲ್ಲಿ ಒಂದು ವ್ಯಾಕರಣವನ್ನೂ ಬರೆದಿರುವಂತೆ ಕಂಡುಬರುತ್ತದೆ. ಆದರೆ ಅದು ದೊರೆತಿಲ್ಲ. ಇವನು ಬೇರೆ ನಯಸೇನನಾಗಿರಬಹುದು.

ಜನಸಾಮಾನ್ಯಕ್ಕಾಗಿ ಸಾಹಿತ್ಯರಚನೆ ಮಾಡುವುದರಲ್ಲಿ ನಯಸೇನನು ಮೇಲ್ಪಂಕ್ತಿಯನ್ನು ಹಾಕಿದನೆಂದು ಹಿಂದೆ ಹೇಳಿದೆ. ಆದುದರಿಂದಲೇ ಅವನು ತನ್ನ ಹಿಂದಿನವರ ಶೈಲಿಯನ್ನು ಈ ರೀತಿ ಹಾಸ್ಯಮಾಡಿದ್ದಾನೆ.

ಪೊಸಕನ್ನಡದಿಂ ವ್ಯಾವ
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ
ತಿಸಿ ಕೂಡಲಾರದಕ್ಕಟ
ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ?

ಸಂಸ್ಕೃತದಲ್ಲಿ ಬರೆಯುವ ಹಾಗಿದ್ದರೆ ಆ ಭಾಷೆಯಲ್ಲಿಯೇ ಬರೆಯಬೇಕು. ಇಲ್ಲದಿದ್ದರೆ ಕನ್ನಡದಲ್ಲಿ ಬರೆಯಬೇಕು. ಹಾಗಿಲ್ಲದೆ ಸಂಸ್ಕೃತದ ದೀರ್ಘಸಮಾಸಗಳನ್ನೂ ಪ್ರೌಢಶೈಲಿಯನ್ನೂ ಕನ್ನಡದಲ್ಲಿ ಸೇರಿಸಿ ಕನ್ನಡಕ್ಕೆ ಹೊರೆ ಮಾಡಬಾರದು. ಇದರಿಂದ ಎಣ್ಣೆ ತುಪ್ಪಗಳನ್ನು ಸೇರಿಸಿದಂತಾಗಿ ಯಾವುದೂ ಭೋಗಯೋಗ್ಯವಾಗುವುದಿಲ್ಲ.

ಸಕ್ಕದಮಂ ಪೇಳ್ವೊಡೆ ನೆಱೆ
ಸಕ್ಕದಮಂ ಪೇಳ್ಗೆ ಸುದ್ಧಗನ್ನಡದೊಳ್ ತಂ
ದಿಕ್ಕುವುದೇ ಸಕ್ಕದಮಂ
ತಕ್ಕುದೆ ಬೆರೆಸಲ್ಕೆ ಘೃತಮುಮಂ ತೈಲಮುಮಂ

ಹೀಗೆ ಹೇಳುವುದರಲ್ಲಿ ನಯಸೇನನ ಅಭಿಪ್ರಾಯವು ಕನ್ನಡದಲ್ಲಿ ಸಂಸ್ಕೃತಪದವೇ ಇರಕೂಡದು ಎಂದಲ್ಲ. ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವ ಪದ್ಯದಲ್ಲಿ ಅವನೇ ಘೃತ, ತೈಲ, ಎಂಬೆರಡು ಸಂಸ್ಕೃತ ಪದಗಳನ್ನು ಉಪಯೋಗಿಸಿದ್ದಾನೆ. ಇದರಿಂದ ಅವನ ಅಭಿಪ್ರಾಯವನ್ನು ವಿವರಿಸಿ ಹೇಳಿದ ಹಾಗಾಗುತ್ತದೆ. ಸುಲಭವಾಗಿ ಅರ್ಥವಾಗುವ ಸಂಸ್ಕೃತ ಪದಗಳನ್ನು

ಕನ್ನಡದಲ್ಲಿ ಉಪಯೋಗಿಸುವುದರಿಂದ ಯಾವ ತೊಂದರೆಯೂ ಉಂಟಾಗುವುದಿಲ್ಲ. ಕ್ಲಿಷ್ಟವಾದ ಪದಪ್ರಯೋಗದಿಂದ ಕವಿಯ ಆಶಯವೇ ನೆರವೇರಿದಂತಾಗುವುದಿಲ್ಲ. ನಯಸೇನನಿಗಿಂತ ಈಚೆಗಿದ್ದ ಆಂಡಯ್ಯನು ಸಂಸ್ಕೃತ ಪದವನ್ನೇ ಪ್ರಯೋಗಿಸದೆ ಗ್ರಂಥರಚನೆ ಮಾಡುವಂತೆ ಹಟತೊಟ್ಟ ಹಾಗೆ ನಯಸೇನನು ಶಪಥ ಮಾಡಲಿಲ್ಲವೆನ್ನುವುದು ಇದರಿಂದ ವ್ಯಕ್ತವಾಗುತ್ತದೆ.

ತನ್ನ ಕಾವ್ಯದಲ್ಲಿ ಸಹಜತೆಯಿದೆಯೆಂದು ನಯಸೇನನ ಹೆಮ್ಮೆ. ಸಹಜವಾಗಿಲ್ಲದೆ ಶಾಸ್ತ್ರಪಾಂಡಿತ್ಯದಿಂದ ಗ್ರಂಥರಚನೆ ಮಾಡಿದರೆ ಹೆಚ್ಚು ಜನರ ರಸಾಸ್ವಾದನೆಗೆ ಅವಕಾಶವಿರುವುದಿಲ್ಲ.

ಮುಟಿಯಿಲ್ಲದೆ ಪೊಯ್ನೀರಿಂ
ಬೆಳೆಗುವೆ ಧರೆ ಮಱುಗಿ ಕುದಿದು ಶಾಸ್ತ್ರದ ಬಲದಿಂ
ದಳಿಪಿಂ[1] ಪೇೞ್ವೊಡಮದು ಕೋ
ಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ ?

ಈ ಸಣ್ಣ ಕಾವ್ಯದಲ್ಲಿ ಜಿನಧರ್ಮವೆಂಬ ಸಮುದ್ರವನ್ನು ದಾಟಲು ಪ್ರಯತ್ನಪಟ್ಟ ತನ್ನ ದಿಟ್ಟತನವನ್ನೂ ಆತ್ಮಖಂಡನೆಯನ್ನೂ ಒಟ್ಟಿಗೆ ಮಾಡಿದ್ದಾನೆ.

ಪಱಿಗೋಲೊಳ್ ವಾರ್ಧಿಯ ತಡಿ
ಗುಱಿದೆ ಭರಂಗೆಯ್ದು ಪೋಪೆನೆಂಬೆಗ್ಗ[2]ನವೊಲ್
ನೆಱೆ ಜಿನಕಾವ್ಯಾಂಬುಧಿಯುಮ
ನುಱದೀಸುವೆನೆಂಬ ದಿಟ್ಟರೆಮ್ಮಂ ಪೆಱರಾರ್

ಆದರೂ ತನ್ನ ಕಾವ್ಯದಲ್ಲಿ ಜಿನಮತದ ಸಾರವೆಲ್ಲವೂ ಲೇಸಾಗಿ ಕಾಣುವಂತೆ ಮಾಡಿದ್ದೇನೆಂದು ಹೇಳಿಕೊಂಡಿದ್ದಾನೆ.

---

1 ಅತ್ಯಾಸೆ 2 ಅಜ್ಞಾನಿ

ಜಿನಮತದೊಳೆನಿತು ಸಾರಮು
ದನಿತುಂ ಲೇಸಾಗಿ ತೋರ್ಪುದೀ ಕೃತಿಯೊಳ್-ಅದೆಂ
ತೆನೆ ಕನ್ನಡಿಯೊಳಗೆ ಜಲ
ಕ್ಕನೆ ತೋರ್ಪವೊಲ್-ಇಭದ ರೂಪು ವಿಸ್ತರದಿಂದಂ

ಕವಿಯ ಮಾತುಗಳು ಕೇವಲ ಜಂಬದ ಮಾತ್ರಲ್ಲವೆಂಬುದು ಅವನ ಗ್ರಂಥದ ಅವಲೋಕನದಿಂದ ವ್ಯಕ್ತವಾಗುತ್ತದೆ.

## ೪. ಧರ್ಮಾಮೃತ

ಕನ್ನಡದಲ್ಲಿರುವ ಅನೇಕ ಜೈನಗ್ರಂಥಗಳಿಗೆ ಸಂಸ್ಕೃತ ಅಥವಾ ಪ್ರಾಕೃತ ಗ್ರಂಥಗಳೇ ಆಧಾರವೆಂಬ ಮಾತನ್ನು ಹಿಂದೆ ಹೇಳಿದೆ. ಆದರೆ ನಯಸೇನನು ಯಾವೊಂದು ಸಂಸ್ಕೃತ ಗ್ರಂಥವನ್ನೂ ಅನುವಾದ ಮಾಡಿದಂತೆ ಕಂಡುಬರುವುದಿಲ್ಲ. ಸಂಸ್ಕೃತದಲ್ಲಿ 'ಧರ್ಮಾಮೃತ'ವೆಂಬ ಒಂದು ಗ್ರಂಥವೇನೋ ಇದೆ. ಆದರೆ ಅದು ಹದಿಮೂರನೆಯ ಶತಮಾನದಲ್ಲಿದ್ದ ಆಶಾಧರನೆಂಬ ಕವಿ ಬರೆದದ್ದು. ಅಲ್ಲದೆ ಅದರಲ್ಲಿ ಶ್ವೇತಾಂಬರ ಮತದ ಪ್ರಕಾರ ಸಾಗಾರರು (ಗೃಹಸ್ಥರು) ಮತ್ತು ಅನಾಗಾರರು (ಸಂನ್ಯಾಸಿಗಳು) ಅನುಸರಿಸಬೇಕಾದ ನಿಯಮಗಳನ್ನು ಹೇಳಿದೆ. ಕನ್ನಡ ಧರ್ಮಾಮೃತವು ದಿಗಂಬರ ಮತದ ಪ್ರಕಾರ ಜೈನ ಗೃಹಸ್ಥರು ಅನುಸರಿಸಬೇಕಾದ ವ್ರತ ಮುಂತಾದುವುಗಳನ್ನು ಹೇಳುತ್ತದೆ. ಇದನ್ನು ನೋಡಿದರೆ ನಯಸೇನನು ಕಥೆಗಳನ್ನು ಬೇರೆ ಬೇರೆ ಕಡೆಗಳಿಂದ ಆರಿಸಿ ತನ್ನ ಗ್ರಂಥದಲ್ಲಿ ಉಪಯೋಗಿಸಿಕೊಂಡಿರಬಹುದೆಂದು ಕಾಣುತ್ತದೆ. ಆದರೆ ಆ ಎಲ್ಲ ಕಥೆಗಳನ್ನು ಹೇಳುವ ರೀತಿಯಲ್ಲಿ ನಯಸೇನನು ಒಂದು ಹೊಸ ಮಾರ್ಗವನ್ನು ಅನುಸರಿಸಿದ್ದಾನೆಂಬುದೇನೋ ನಿಜ.

ಕನ್ನಡ ಧರ್ಮಾಮೃತದಲ್ಲಿ ಜೈನದರ್ಶನ, ಅದರ ಎಂಟು ಅಂಗಗಳು ಮತ್ತು ಐದು ಅಣುವ್ರತಗಳು—ಇವುಗಳ ಮಹಿಮೆಯನ್ನು ಕವಿ ವರ್ಣಿಸಿದ್ದಾನೆ. ದರ್ಶನವೆಂದರೆ ವಿಚಾರ ವಿವೇಕಪೂರ್ವಕವಾಗಿ ಜೈನ ಮತದಲ್ಲಿ ಸಂಪೂರ್ಣ ನಂಬಿಕೆಯನ್ನಿಟ್ಟಿರುವುದು. ಅಂದರೆ ಜೈನ ಧರ್ಮದಲ್ಲಿ ಸಂಪೂರ್ಣ ಜ್ಞಾನವಿದ್ದು ಅದನ್ನು ಜೀವನದಲ್ಲಿ ಉಪಯೋಗಿಸಿಕೊಳ್ಳುವುದನ್ನು ಅರಿತಿರಬೇಕು. ಆ ದರ್ಶನದ ಅಂಗಗಳು ಎಂಟು.

'ನಿಶ್ಶಂಕೆ' = ಜೈನದರ್ಶನದಲ್ಲಿ ಸಂದೇಹವಿಲ್ಲದಿರುವುದು.

'ನಿಷ್ಕಾಂಕ್ಷೆ' = ಲೋಕದ ಸುಖಭೋಗಗಳಿಗೆ ಆಸೆ ಇಲ್ಲದಿರುವುದು.

'ನಿರ್ವಿಚಿಕಿತ್ಸೆ' = ದೇಹದಮೇಲೆ ಪ್ರೀತಿಯಾಗಲಿ ದ್ವೇಷವಾಗಲಿ ಇಲ್ಲದಿರುವುದು.

'ಅಮೂಢ ದೃಷ್ಟಿತ್ವ' = ಜೈನಮಾರ್ಗವನ್ನು ಬಿಟ್ಟು ಬೇರೆ ಮಾರ್ಗಗಳಿಗೆ ಹೋಗದಿರುವುದು.

'ಉಪಗೂಹನ' = ಜೈನಮತದಲ್ಲಿ ಸಂಪೂರ್ಣ ನಂಬಿಕೆ ಇಲ್ಲದಿರುವವರ ಸಂಶಯಗಳನ್ನು ನಿವಾರಣೆ ಮಾಡುವುದು.

'ಸ್ಥಿತಿಕರಣ' = ಆತ್ಮನು ಸರಿಯಾದ ನಂಬಿಕೆಯನ್ನು ಬಿಡದ ಹಾಗೆ ನೋಡಿಕೊಳ್ಳುವುದು.

'ವಾತ್ಸಲ್ಯ' = ಜೈನಶ್ರಾವಕರಲ್ಲಿ ಪ್ರೀತಿಪೂರ್ವಕವಾದ ಗೌರವವನ್ನು ತೋರಿಸುವುದು.

'ಧರ್ಮಪ್ರಭಾವನೆ' = ಜೈನಸಿದ್ಧಾಂತಗಳ ಮಹಿಮೆಯನ್ನು ಸಾರುವುದು.

'ಕೊಲ್ಲದ ಪುಸಿಯದ ಕಳವಿನಿ
ಸಿಲ್ಲದ ಪರವನಿತೆಯೊಳ್ ಪದಪಿಂ ಚಿತ್ತಂ
ಸಲ್ಲದ, ಪರಿಗ್ರಹಕ್ಕಳಿ
ಪಿಲ್ಲದ'

ಐದು ಅಣುವ್ರತಗಳು. ಹೀಗೆ ಈ ಹದಿನಾಲ್ಕು ವಿಷಯಗಳನ್ನೂ ಕವಿ ಒಂದೊಂದು ಆಶ್ವಾಸದಲ್ಲಿ ವಿವರಿಸಿದ್ದಾನೆ. ಪ್ರತಿ ಆಶ್ವಾಸದಲ್ಲಿಯೂ ಆಯಾ ವಿಷಯದಲ್ಲಿ ಅತಿಶಯವಾದ ಗೌರವವಿಟ್ಟು ಮೋಕ್ಷಸಂಪಾದನೆ ಮಾಡಿದ ಮಹಾಪುರುಷರ ಕಥೆಗಳು ಬರುತ್ತವೆ. ಎರಡು ಕಥೆಗಳಿಂದ ಮುಂದೆ 'ಧರ್ಮಾಮೃತ'ದ ಪರಿಚಯವನ್ನು ಮಾಡಿಕೊಟ್ಟಿದೆ.

## ೪. ದರ್ಶನದ ಕಥೆ

ಜಂಬೂದ್ವೀಪದ ಮೇರುಗಿರಿಯ ದಕ್ಷಿಣ ಭಾಗದ ಭರತ ಕ್ಷೇತ್ರದಲ್ಲಿ ಸೌರಾಷ್ಟ್ರವೆಂಬ ರಾಜ್ಯವಿದ್ದಿತು. ಅಲ್ಲಿ ದಯಾಮಿತ್ರಸೆಟ್ಟಿ ಎಂಬ ವರ್ತಕನು ಅನುಪಮ ಐಶ್ವರ್ಯಕ್ಕೆ ಒಡೆಯನಾಗಿ ಸುಖವಾಗಿದ್ದನು. ಆತನು ಒಂದು ಸಲ ದ್ರವ್ಯಾರ್ಜನಾಭಿಲಾಷೆಯಿಂದ ವ್ಯಾಪಾರಕ್ಕಾಗಿ ಪರದೇಶಕ್ಕೆ ಹೊರಟನು. ಆಗ ವಸುಭೂತಿಯೆಂಬ ಬ್ರಾಹ್ಮಣನು ಬಂದು ತಾನು ಗಂಗಾಸ್ನಾನಕ್ಕೆ ಹೊರಟಿದ್ದುದಾಗಿಯೂ, ಯಾರೂ ಜೊತೆಗೆ ಸಿಕ್ಕದಿರಲು ಸೆಟ್ಟಿಯ ನೆರವನ್ನು ಆಶ್ರಯಿಸಿ ಬಂದೆನೆಂದೂ ಹೇಳಿದನು. ದಯಾಮಿತ್ರನು ಸಹಜವಾಗಿಯೇ ದಯಾಶಾಲಿಯಾದುದರಿಂದ ಅವನನ್ನು ಒಡಗೊಂಡು ಪ್ರಯಾಣ ಬೆಳಸಿದನು. ದಿನಕ್ಕೆ ಮೂರು ಗಳಿಗೆಯಷ್ಟು ಹೊತ್ತು ಧರ್ಮ ಶ್ರವಣವಿಲ್ಲದೆ ಸೆಟ್ಟಿಯು ಊಟ ಮಾಡುತ್ತಿರಲಿಲ್ಲವಾದುದರಿಂದ, ಪ್ರತಿನಿತ್ಯವೂ ತಾನೇ ಅಲ್ಲಿದ್ದ ಶ್ರಾವಕರಿಗೆಲ್ಲ ಧರ್ಮವನ್ನು ಹೇಳುತ್ತಿದನು. ಇದನ್ನು ನೋಡಿ ವಸುಭೂತಿಯು ಜೈನ ಮತವನ್ನೂ ಆ ಸೆಟ್ಟಿಯ ಗಾಂಪತನವನ್ನೂ ತನ್ನ ಮನಸ್ಸಿನಲ್ಲಿಯೇ ದೂಷಿಸಿದನು.

ಕುಲಮಂ ಪೂಸಿಸಿ ಮೀಹಮಂ[1] ತೊಱೆದು ಕಂಡರ್ ಪೇಸೆ
ಮೆಯ್ಯೊಳ್ ಮಹಾ
ಮಲಮಂ ತಾಳ್ದಿದ ಕಷ್ಟರಂ ಸವಣರಂ ಕಂಗೆಟ್ಟರಂ ಕಂಡು ಸಂ
ಚಲಚಿತ್ತಂ ಕುಲದೈವಮೆಂದು ಪದಪಿಂ ಕೊಂಡಾಡುವ-ಇಂತಪ್ಪಗಾ
'ಖಳನಂ ಗಾಂಪನನೆಗ್ಗನಂ ಜಡನನ್-ಆಂ ಕಾಣೆಂ ಮಹೀಚಕ್ರದೊಳ್

---

1 ಸ್ನಾನವನ್ನು

ಹೀಗೆ ಸೆಟ್ಟಿಯನ್ನು ದೂಷಿಸಿ ಅವನನ್ನು ಕುರಿತು ಹೀಗೆ ಹೇಳಿದನು.

'ಎಲ್ಲೆಲ್ಲ ವಸ್ತುಗಳುಮಂ
ಬಲ್ಲರ್ ನಿಮ್ಮನ್ನರಿಲ್ಲ ಬುದ್ಧಿಗೆ ನೀವುಂ
ನಿರ್ಲಜ್ಜರಪ್ಪ ಸವಣರ
ಸೊಲ್ಲಿಂಗೆ-ಒಳಗಾದುದಕ್ಕೆ ನಾಂ ಬೆಱಗಾದೆಂ'

ಮಲಮಂ ಧರಿಯಿಸಿ ನಾಣಂ
ತೊಲಗಿಸಿ ನಿರ್ಗ್ರಂಥ[1]ಮಿರ್ದು ಸೋಂಬಿ[2] ಪಲ್ಲಂ
ಸುಲಿಯದೆ ಮಿಾಯದೆ ಮುಳ್ಕದೆ[3]
ಕುಲದಿಂ ಕೆಟ್ಟವರನಣ್ಣ ನೀಂ ಮನ್ನಿಪುದೇ ?'

ಸೆಟ್ಟಿಗೆ ಜೈನ ಮತದಲ್ಲಿ ಸ್ಥಿರವಾದ ನಂಬಿಕೆಯಿತ್ತು. ವಸುಭೂತಿಯ ಮಾತುಗಳು ಅವನ ಮನಸ್ಸನ್ನು ನೋಯಿಸಿದುವು. ಅವನನ್ನು ಜೈನಮತಕ್ಕೆ ಸೇರಿಸಬೇಕೆಂದು ಮನಸ್ಸು ಮಾಡಿದನು. ಶ್ರೇಷ್ಠವಾದ ಜೈನಧರ್ಮವನ್ನು ಒಂದೇ ಸಲ ಅವನಿಗೆ ಬೋಧಿಸಿದರೆ ಮಗುವಿನ ಕೈಲಿ ಕತ್ತಿಯನ್ನು ಕೊಟ್ಟ ಹಾಗೂ ಕಪಿಯ ಕೊರಳಿಗೆ ಹೂಮಾಲೆ ಹಾಕಿದ ಹಾಗೂ ಆಗುತ್ತದೆಂದು ಎಣಿಸಿ ಒಂದು ಉಪಾಯವನ್ನು ಹೂಡಿದನು. ಮಾರನೆಯ ದಿನ ವಸುಭೂತಿಯನ್ನು ಬರಿಸಿ,

'ಭಟ್ಟರೆ ಕೇಳಿಂ ನಿಮ್ಮಂ
ಬಿಟ್ಟರೆ ಕೆಲರ್-ಕುಲಜರೊಳರೆ[4] ನಂಬಿದೆನೀಗಳ್
ನೆಟ್ಟನೆ ನಿಮ್ಮಿಂ ಸುಗತಿಯ
ಬಟ್ಟೆಯು ತೆಱಿನ್ ಅಱಿದುಲಾಯ್ತು ಪುಣ್ಯೋದಯದಿಂ

ಎಂದು ಹೊಗಳಿ "ನಮ್ಮ ವಂಶಪಾರಂಪರ್ಯವಾಗಿ ಬಂದ ಒಂದು ವ್ರತವಿದೆ. ಅದನ್ನು ನಡೆಸುವ ಕಾಲ ಹತ್ತಿರಕ್ಕೆ ಬಂದಿದೆ.

---

1 ಬಟ್ಟೆಯಿಲ್ಲದೆ 2 ಸೋಮಾರಿತನದಿಂದ 3 ಮುಳುಗದೆ 4 ಇದ್ದಾರೆಯೆ

ನಿಮ್ಮಂಥವರು ಸಿಕ್ಕಿರುವಾಗ ಜೈನಮುನಿಗಳೇ ಆಗಬೇಕೆಂಬ ನಿಯಮವಿಲ್ಲ. ನೀವೇ ಆ ವ್ರತವನ್ನು ನಡೆಸಿ ಕೊನೆಯಲ್ಲಿ ಮನಸ್ಸಿಗೆ ಬಂದಷ್ಟು ದಕ್ಷಿಣೆಯನ್ನು ಕೇಳಬಹುದು" ಎಂದು ಹೇಳಿದನು. ಆ ಬ್ರಾಹ್ಮಣನಿಗೆ ಬಲು ಸಂತೋಷವಾಯಿತು.

ಬಿತ್ತರದಿಂ ಕುರುಡಂ ಕ
ಣ್ಬೆತ್ತಂತಿರೆ ರಾಗವೊದವೆ ಬೆಲೆವೆಣ್[1] ಪೆಣ್ಣಂ
ಪೆತ್ತಂತಿರೆ ಪಾರ್ವಂ ಮ
ಣ್ಬೆತ್ತಂತಿರೆ ಪಿರಿದು ಸಂತಸಂ ಮಿಗೆ ಮನದೊಳ್

"ಮರ್ದನಗುಳಿಲ್ಲೊ ಡಂ ನಿಧಿಗಂಡಂತಿರೆ" ಉತ್ಸಾಹಗೊಂಡು ತನ್ನಲ್ಲಿ ಹೀಗೆ ಯೋಚಿಸಿದನು.

'ಒದವಿದ ಪೊನ್ನಪ್ಪೊಡೆ ಜೋ
ಳದ ರಾಸಿಯುಮೊಲಿಪ್ಪುದಿಲ್ಲಿ ತಾನೇನಂ ಬೇ
ಡಿದೊಡಂ ಬೇಡಿದುದಂ ಕುಡು
ವುದು ಪುಸಿಯೇ ? ವೈಶ್ಯನಂದನು ಪುಸಿದಪನೇ ?

ನೆರಪಲ್ಬಾರದ ವಿತ್ತಂ
ದೊರೆಕೊಂಡುದು ನೆಲೆಗೆ ಪೋಗಿ ಮಕ್ಕಳೊಳಂ ಪೆಂ
ಡಿರೊಳಮೊಡಗೂಡಿ ಸುಖದಿಂ
ಚರಿಯಿಸುವೆಂ ಮೆಚ್ಚಿದಂದದಿಂ ಭೋಗಿಸುವೆಂ'

ಹೀಗೆ ಮನಸ್ಸಿನಲ್ಲಿಯೇ ಹಾಲು ಕುಡಿದು ಕಡು ಚಪಲ ನಾಗಿ ಸೆಟ್ಟಿ ಹೇಳಿದ ವ್ರತದ ರೀತಿಯನ್ನು ಕೇಳಿದನು. ಸೆಟ್ಟಿ ಆ ಕ್ರಮವನ್ನು ಹೀಗೆ ವಿವರಿಸಿದನು "ಅನ್ನವನ್ನೂ ತುಪ್ಪ ವನ್ನೂ ಇನ್ನೊಬ್ಬರ ಕೈಲಿ ಬಡಿಸಿಕೊಂಡು ಊಟ ಮಾಡಿ ಮಾರನೆಯ ದಿನ ಅದೇ ಹೊತ್ತಿನವರೆಗೆ ನೀರು, ಊಟ, ತಾಂಬೂಲ ಮೊದಲ್ಗೊಂಡು ಯಾವುದನ್ನೂ ನೆನೆಯದೆ ಮನೆ

1 ಸೂಳೆ

ಯಲ್ಲಿಯೇ ಓದುತ್ತಾ ಕುಳಿತಿರಬೇಕು. ಮೈ ಕೊಳೆಯಾಯಿತೆಂದು ಮೀಯಲಾಗದು. ಹಲ್ಲನ್ನು ತಿಕ್ಕಕೂಡದು. ವ್ರತಕ್ಕೆ ಮುಂಚೆ ನಿಮ್ಮ ತಲೆಯ ಕೂದಲೆಲ್ಲವನ್ನೂ ತರಿದು ಬತ್ತಲೆ ಇರಬೇಕು. ಹೀಗೆ ಎರಡು ತಿಂಗಳವರೆಗೆ ವ್ರತವನ್ನು ಆಚರಿಸಬೇಕು."

ಬ್ರಾಹ್ಮಣನಿಗೆ ಹಣದಾಸೆ ಹೆಚ್ಚಾಗಿದ್ದುದರಿಂದ ಈ ವ್ರತವನ್ನು ನಡೆಸುತ್ತೇನೆಂದು ಮನಸ್ಸು ಮಾಡಿದನು.

ಒಳಗಱಿಯದನಿತುಮಂ ಸಂ
ಚಳಚಿತ್ತಂ ಮಾಟ್ಪೆನೆಂದು ಪೂಣ್ದಂ ತನ್ನೊಂ
ದಳವಱಿಯದೆ ಕಡುಲೋಭದಿ
ನೆಳಗಱು ಭಯಮಱಿಯದೆಂಬವೊಲ್ ತದ್ವಿಪ್ರಂ

ತನ್ನ ಕಡೆಯವರು ಯಾರೂ ಹತ್ತಿರ ಇಲ್ಲವೆಂದು ಬ್ರಾಹ್ಮಣನಿಗೆ ಧೈರ್ಯವಾಯಿತು.

'ಆರಯ್ದು ನೋಡಿ ನಗುವವ
ರಾರೆನ್ನಂ ದೂರದೇಶಂ. ಆಂ ನೋಂಪೆನಿದಂ
ಸ್ವೈರಣೆಯಿಂ, ಚೆಂಬೊಂಗಳ
ನೋರಂತೆ ಬೇಡಿಕೊಳ್ವೆ ಎನ್ನ–ಅರ್ಪನಿತಂ

ಉಸಿರದೆ ಗಳಿಗೆವರಂ ಸೈ
ರಿಸಿ ತಲೆಯಂ ಪಱಿಸಿಕೊಂಡು[1] ಚೆಂಬೊನ್ನಂ ಸಂ
ತಸದಿಂ ಕೈಕೊಳ್ವೆಂ ಭಾ
ವಿಸುವೊಡೆ ತಲೆಯಲ್ಲಿ ಮತ್ತೆ ಪುಲ್ಮೊಳೆದಪುದೇ? '

ಮೂರನೆಯ ದಿನ ವ್ರತವಾರಂಭವಾಯಿತು. ತಲೆಯ ರೋಮಗಳೆಲ್ಲವನ್ನೂ ಕೀಳುವಾಗ ವಸುಭೂತಿಯ ಪಾಡು ನಾಯಿ ಪಾಡಾಯಿತು.

---

1 ಕೂದಲು ಕೀಳಿಸಿಕೊಂಡು

ತಲೆಯುಂ ಬಲ್ದುದಡಿಗೞ್ಕಿಟ್ಟಿ[1]
ನಿಲಲಾಱದೆ ಸುಂಟಿತಿಂದ ಕೋಡಗದಂತು
ಮ್ಮಳಿಸಿ ಕಳವಳಿಸಿ ನೋವಿಂ
ತಲೆಯುಂ ತಿರಿಪುತ್ತು ಮುಂಜಿ ಕೆಟ್ಟೆನೆನುತ್ತುಂ

ಬಿಡದೌಡುಗರ್ಚಿ ನೋವಿಂ
ದಡಿಗಡಿಗಹಹಾಯೆನುತ್ತು ಮೆಡಗಯ್ಯಿಂದಂ
ತಡವರಿಸುತ್ತುಂ ಸಾಸವೆ
ಗುಡಿದಂತಿರೆ ಕರಮೆ ಮಱುಗಿ ತಳವೆಳಗಾದಂ

ಆಮೇಲೆ ಪಾಣಿಪಾತ್ರೆಯಲ್ಲಿ ಹಾಲು ಸಕ್ಕರೆ ಕುಡಿದು

ಸೊಗಯಿಪ ಘೃತಪೂರಂ ಹೋ
ಳಿಗೆ ಮಂಡಗೆ ತಱಗು ನಾಡೆ ರುಚಿವೆರಸಿದ ಲ
ಡ್ಡುಗೆ ಚಕ್ಕುಲಿ ಗಾರಿಗೆ ಪೂ
ರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮನಾಗಳ್

ಮೆದ್ದು, ಗಟ್ಟಿಯಾದ ಮೊಸರನ್ನು ಕುಡಿದ ಮೇಲೆ

ಕಳವೆಯಕೂೞ್ಮಿಗಮುಗಿಸುವ
ತಿಳಿಮುಪ್ಪುಂ ತಿವುಡು[2]ಗಳಿದ ಪೊಂಬೆಸಱ ಮಹೋ
ಜ್ವಳಮಪ್ಪ ಕಂಚಿನಿಂಪಿನ
ನಿಳಯುಮುಮೆನಿಸಿರ್ದ ಸವಿಯಿನೊದವಿದ ತೊಮೆಯುಂ[3]

'ಅಮೃತದೊಳ್ ಮಚ್ಚರಿಸುವ, ರಸಾಯನದೊಳ್ ಪ್ರಸುಡಿಸುವ ದಿವ್ಯಾಹಾರಮಂ ಆಕಂಠಮುಂಡು, ಬೞಿಕ್ಕೆ ಪೋಗಿರ್ಪುದಂ, ಆರ್ಪನಿತು ನೀರಂ ಕುಡಿದು, ಪಗಲೆಲ್ಲಂ ಸಂತಸದಿನಿರ್ದು' ರಾತ್ರಿಯಾದ ಮೇಲೆ ಬಾಯಾರಿಕೆ ಹೆಚ್ಚಾಗಲು ಬಿಸುಸುಯ್ಯುತ್ತ, ಹುಲ್ಲಿನಲ್ಲಿ ಮುಚ್ಚಿದ ಕೋತಿ ಸಿಡಿಮಿಡಿಗೊಳ್ಳುವ ಹಾಗೆ ಸಿಡಿಮಿಡಿಗೊಳ್ಳುತ್ತ ಆ ರಾತ್ರಿಯ ನಾಲ್ಕು

---

1 ದಂಡಧಾರಿ 2 ತವುಡು 3 ತೊವ್ವೆ

ಜಾವವೂ 'ವನೌಕೂರ್ಕಿಕನಂತೆ ಪೊತ್ತಿನಳವಿಯುಂ ನೋಡುತ್ತುಂ ಜಾವದ ಕಾಪಿನವನಂತೇಳುತ್ತುಂ, ಜಂಘಾಬಲವಿಲ್ಲದನಂತೆ ಕುಳ್ಳಿರುತ್ತುಂ, ಮರುಳನಂತೆ ತನ್ನೊಳ್ ತಾನೆ ನುಡಿಯುತ್ತುಂ, ಮಾಬಿಯುಂ ಪಾರ್ವ ಒಕ್ಕಲಿಗನಂತೆ ಗಗನಮಂಡಲಮಂ ನೋಡುತ್ತುಂ, ಚಾದಗೆಯಂತೆ ಆಕಾಸವನಿಗೆ[1] ಬಾಯುಂ ಬಿಡುತ್ತುಂ, ಕಪ್ಪೆಯಂತೆ ತಣ್ಪುಪ್ಪೆಡೆಯೊಳ್ ಪತ್ತುತ್ತುಂ, ಚೊಚ್ಚಲ್ ಪೆಱುವಳಂತೆ ತೊಳಲುತ್ತುಂ, ಕಣ್ಗೊಳ್ ಜೆಳಗಾಗೆ,' ಮನಸ್ಸಿನಲ್ಲಿ ಈ ವ್ರತವನು, ಬಿಟ್ಟರೆ ಚಿನ್ನದ ರಾಶಿ ಸಿಕ್ಕುವುದು ತಪ್ಪಿಹೋಗುತ್ತದೆ; ಧೈರ್ಯದಿಂದ ವ್ರತ ನಡೆಸೋಣವೆಂದರೆ ಬಾಯಾರಿಕೆಯಿಂದ ಪ್ರಾಣ ಹೋಗುತ್ತದೆ ಎಂದು ಯೋಚಿಸುವುದಕ್ಕೆ ಮೊದಲುಮಾಡಿದನು. ಎರಡನೆಯ ದಿನವೂ ಬಾಯಾರಿಕೆಯ ತೊಂದರೆ ಹೆಚ್ಚಾಗಿದ್ದುದರಿಂದ ಮೂರನೆಯ ದಿನ 'ಭಕ್ಷ್ಯದ ದೆಸೆಗೆ ಪಕ್ಷಂಗೆಟ್ಟು, ಪಾಲಿಂಗೆ ಬೆರ್ಚಿ, ತುಪ್ಪಕ್ಕೆ ಇನಿಸಪ್ಪೊಡಂ ಮನಂದರಲಾಜದೆ' ಅವೊಂದೂ ಬೇಡ ಎಂದು ಹೇಳಿದನು. ದಯಾಮಿತ್ರ ಸೆಟ್ಟಿಯು 'ಅಟಿಸರಪ್ಪ ರಿಸಿಯರ್ಮೊದಲಾಗಿಯುಸಿರದೆಮ್ಮ ಪೇಟ್ದಂತೆ ಮೋನದಿಂದುಂಬರೆಂದೊಡೆ, ಕುಲಜರುಂ ಭೂದೇವರುಮಪ್ಪ ನಿಮಗಿದಾವುದರಿದಾಯ್ತು ಉಸಿರದಿರಿಂ' ಎಂದು ಹೇಳಲು ಮರುಮಾತಾಡದೆ ಊಟ ಮಾಡಿದನು. ಹೀಗೆ ಏಳೆಂಟು ದಿನಗಳು ಕಳೆದ ಮೇಲೆ ಈ ವ್ರತಕ್ಕೆ ಸೈರಣೆಗೆಟ್ಟು, ಗಾಳಿಗೊಡ್ಡಿದ ಸೊಡರಿನ ಹಾಗೆ ನಡುಗಿ, ಮಟದ ಬೆಕ್ಕಿನ ಹಾಗೆ ಒಳಗೊಳಗೆ ಓಡಾಡಿ, ಒಡ್ಡೆಯಾದ ತಮಟೆಯಂತೆ ಸದ್ದುಮಾಡದೆ ಹೀಗೆ ಹೇಳಿದನು. 'ಎಱಿಸ[2] ಮೇಲೆ ಬಡಿಗೋಲು, ಕೊಲೆಯ

---

1 ಆಕಾಶದ ಹನಿ   2 ಗಾಯ

ಮೇಲೆ ಕವರ್ತೆಯೆಂಬಂತೆ, ಸಂತಾಪದ ಮೇಲೆ ಸಂತಾಪಮಂ ಮಾಳ್ಪ ನಿನ್ನ ನೋಂಪಿಯೆಂಬ ಗರಗಸಕ್ಕೆನ್ನ ಮೆಯ್ಯನೊಡ್ಡಲಾಱೆಂ, ಮತ್ತಂ ಒಂದೆರಡು ತಿಂಗಳ್ ವಿಶೇಷವಾಗಿ ನೋಂತು ಕೊಟ್ಟಪೆಂ ಪಿರಿದಪ್ಪೆನ್ನುಮ್ಮಳಿಕೆಪೋಪಂತು ಕೆಱೆಗೆ ಪೋಗಿ ಮೆಯ್ಯಂ ಕರ್ಚಿಕೊಂಡು ಒರ್ಮೆಯಿರ್ಪೆ ನೀರಂ ಕುಡಿದು ನಿಮ್ಮ ಬೀಡಿನೊಳೊಂದೆರಡು ಗಳಿಗೆ ಸುಟಿದಾಡುವಂತೆ ಮಾಳ್ಪುದು' ಈ ಮಾತು ಕೇಳಿ ಸೆಟ್ಟಿ 'ಬಾಯುತಂಬುಲಂ ಸೂಸೆ, ಕಳಕಳಿಸಿ ನಕ್ಕು

'ಕಡುಮೂರ್ಖರ್ ತಮ್ಮಿಚ್ಚೆಗೆ
ಪಿಡಿದುದೆ ಪಿರಿದೆಂಬರಣ್ಣ ಜಿನಮಾರ್ಗದೊಳೇಂ
ನಡೆಯಲ್ ಬರ್ಕುಮೆ ಬಾರದು
ಕಡಲೆಗಳಂ ತಿಂಬ ಮೊಗ್ಗು ಕಲ್ಗಳೊಳುಂಟೇ ?'

'ಇದಕ್ಕಿಂತಲೂ ಕಷ್ಟತರವಾದ ಅನೇಕ ವ್ರತಗಳನ್ನು ನಡೆಸುವ ಋಷಿಗಳ ಧೈರ್ಯವನ್ನು ಹೊಗಳಲು ಯಾರಿಗೆ ಸಾಧ್ಯ. ನೀವು ಇಷ್ಟಕ್ಕೇ ಹಿಂತೆಗೆದಿರಲ್ಲಾ' ಎಂದು ಹೇಳಿದನು. ಆಗ ವಸುಭೂತಿಗೆ ಜೈನಧರ್ಮದ ಹಿರಿಮೆ ಗೊತ್ತಾಯಿತು. ತನಗೆ ಜೈನಧರ್ಮದ ತಿರುಳನ್ನು ತಿಳಿಸಬೇಕೆಂದು ಆ ಸೆಟ್ಟಿಯನ್ನು ಕೇಳಿಕೊಂಡನು. ಅವನು ವಸುಭೂತಿಗೆ ಅದೆಲ್ಲವನ್ನೂ ವಿವರಿಸಿ ಹೇಳಿದನು. ವಸುಭೂತಿ ಅದರಲ್ಲಿ ನಂಬಿಕೆಯಿಟ್ಟು, ಸತ್ತ ಮೇಲೆ ದೇವಲೋಕದಲ್ಲಿ ಮಣಿಕುಂಡಲನೆಂಬ ದೇವನಾಗಿ ಹುಟ್ಟಿದನು. ಒಂದು ಸಲ ದಯಾಮಿತ್ರನ ಹತ್ತಿರಕ್ಕೆ ಬಂದು 'ನಿನ್ನ ಪ್ರಸಾದದಿಂದ ದೇವನಾದೆನೆಂದು' ಹೇಳಿ ಜೈನ ದರ್ಶನದಲ್ಲಿ ನಂಬಿಕೆ ಬಲಿತು ಅನೇಕ ವರ್ಷಗಳು ದೇವಲೋಕದಲ್ಲಿ ಸುಖವನ್ನು ಅನುಭವಿಸಿದನು.

ಈ ಕಥೆಯ ಮುಖ್ಯ ಉದ್ದೇಶ ಜೈನಧರ್ಮವನ್ನು ನಂಬುವುದರಿಂದ ಆಗುವ ಸದ್ಗತಿಯನ್ನು ವರ್ಣಿಸುವುದು. ಅದನ್ನು ಸಾಧಿಸುವುದಕ್ಕೆ ಬೇಕಾದ ಜಾಣ್ಮೆಯನ್ನು ಕವಿ ಇಲ್ಲಿ ತೋರಿಸಿದ್ದಾನೆ. ಕಥೆಯಿರುವುದು ಸ್ವಲ್ಪವಾದರೂ ಅದನ್ನು ಬೆಳೆಸಿರುವ ರೀತಿ ಚೆನ್ನಾಗಿದೆ. ಕಥೆ ಹಾಸ್ಯದಿಂದ ತುಂಬಿ ಸ್ವಾರಸ್ಯವಾಗಿದೆ. ಇಲ್ಲಿ ವಸುಭೂತಿ ದುಡ್ಡಿನ ಆಸೆಯಿಂದ ಯಾವ ಕೆಲಸ ಮಾಡುವುದಕ್ಕೂ ಸಿದ್ಧನಾಗಿದ್ದಾನೆ. ಅವನಿಗೆ ಊಟ ಮಾಡಿಸುವುದರ ಮೂಲಕವೇ ಸೆಟ್ಟಿಯು ಅವನಿಗೆ ಬುದ್ಧಿ ಕಲಿಸಲು ಪ್ರಯತ್ನಪಟ್ಟಿದ್ದಾನೆ. ಸನ್ನಿವೇಶ ಹಾಸ್ಯಮಯವಾಗಿದೆ ಕೂದಲನ್ನು ಕೀಳಿಸಿಕೊಳ್ಳುವಾಗ, ಬಾಯಾರಿಕೆಯಿಂದ ಒದ್ದಾಡುವಾಗ ವಸುಭೂತಿಯ ಚಿತ್ರ ನಗುವನ್ನು ತರುತ್ತದೆ. ಈ ಕಥೆಯನ್ನು ಓದಿದ ಮೇಲೆ ವೈದಿಕ ಜನದ ಹುರುಳಿಷ್ಟೇಯೋ ಏನೋ ಎನ್ನುವ ಭ್ರಮೆ ಹುಟ್ಟುವಂತೆ ಕವಿ ಮಾಡಿದ್ದಾನೆ. ಎಲ್ಲ ಮತದವರಲ್ಲಿಯೂ ಇಂತಹ ಕಪಟ ವ್ಯಕ್ತಿಗಳಿರುತ್ತಾರೆ. ವಸುಭೂತಿಯನ್ನು ಇಂತಹವರ ಪ್ರತಿನಿಧಿಯೆಂದು ನಾವು ಹೇಳಬಹುದು. ಆದುದರಿಂದ ಧರ್ಮದ ದೃಷ್ಟಿಯನ್ನು ಬಿಟ್ಟರೂ ಸಹಿತ ಕವಿ ಇಲ್ಲಿ ಒಂದು ಬಗೆಯ ಸ್ಪಷ್ಟ ಹಾಸ್ಯವನ್ನು ತುಂಬಿ ಕಥೆ ಸ್ವಾರಸ್ಯವಾಗುವಂತೆ ಮಾಡಿದ್ದಾನೆ.

## ೫. ಅಹಿಂಸಾವ್ರತದ ಕಥೆ

ಕವಿಯ ಪರಿಚಯ ಪೂರ್ಣವಾಗಿ ಆಗಬೇಕಾದರೆ, ಆತನು ಜೀವಿಸಿದ್ದ ಕಾಲ, ಸಮಕಾಲಿಕ ವ್ಯಕ್ತಿಗಳು ಮತ್ತು ಸನ್ನಿವೇಶಗಳು ಇವುಗಳ ಪರಿಚಯವು ಎಷ್ಟು ಆವಶ್ಯಕವೋ ಕವಿಯ ಪದಬಂಧದ ಪರಿಚಯವೂ ಅಷ್ಟೇ ಆವಶ್ಯಕ. ಕವಿಗೆ ಯಾವ ವೃತ್ತಗಳ ಮೇಲೆ ಮಮತೆ ಹೆಚ್ಚು, ಯಾವ ಶೈಲಿಯಲ್ಲಿ ಆಸಕ್ತಿಯಿದೆ, ಎಂತಹ ಅಲಂಕಾರಗಳಲ್ಲಿ ಪ್ರೇಮವಿದೆ ಎಂಬುದು ಅವನ ಪದಗುಂಫನವನ್ನು ನೋಡುವ ತನಕ ವ್ಯಕ್ತವಾಗುವುದಿಲ್ಲ. ಆದುದರಿಂದ ಧರ್ಮಾಮೃತದ ಒಂದು ಕಥೆಯನ್ನು ಕವಿಯ ಮಾತುಗಳಲ್ಲಿಯೇ ಸಂಗ್ರಹಿಸಿ ಮುಂದೆ ಕೊಟ್ಟಿದೆ.

ನೆಗಟ್ದಿರ್ದಾ[1] ಮಾಳವೋರ್ವೀವಳಯದೊಳಮರಾಧೀಶ
ನಂತಪ್ಪ ಸದ್ಭೋ
ಗಿಗಳಿಂ ದೇವೇಂದ್ರಧಾತ್ರೀರುಹಮನಿಳಿಸಿ[2] ಕಯ್ವಾರದಿಂದೀ[3]ವ ಸತ್ಪಾ
ಗಿಗಳಿಂ ಶ್ರೇಯಾಂಸನೊಳ್ ಮಚ್ಚರಿಸಿ ಬಿಡದೆ ನಿರ್ಲೋಭ
ದಿಂದೀವ ಸದ್ಧಾ
ನಿಗಳಿಂದುಜ್ಜಯಿನಿಯೆಂಬಾ ಪುರವರಮೆಸೆಗುಂ ನಾಡೆಯುಂ[4]
ಶೋಭೆಯಿಂದಂ

ಆ ಪುರಮನಾಳ್ವಂ ವಿಶ್ವಂಭರ ಮಹಾರಾಜನಾತನ ರಾಜಶ್ರೇಷ್ಠಿ ಗುಣಪಾಲನೆಂಬನಾತನ ಭಾರ್ಯೆ ಧನಶ್ರೀಯೆಂಬಳ್

ನೆಗಟ್ದಾ ಗುಣಪಾಲಂಗಂ
ಮೃಗನಯನೆಯೆನಿಪ ತದ್ಧನಶ್ರೀಗಂ ಕೈ
ಮಿಗೆ[5] ರಾಗಂ ಪುಟ್ಟಿದಳು
ರ್ವಿಗೆ ಲಕ್ಷ್ಮಿಯೆ ಪುಟ್ಟುವಂತೆ ಕನ್ಯಾರತ್ನಂ

---

1 ಪ್ರಸಿದ್ಧವಾದ 2 ಹೀಯಾಳಿಸಿ 3 ಹೊಗಳಿಕೆ 4 ಹೆಚ್ಚು
5 ಹೆಚ್ಚಾಗು

ಸುಬಂಧುಶ್ರೀಯೆಂಬಳ್. ಅಂತವರ್ ಸುಖದಿಂದಿರ್ಪುದುಂ ಒಂದು ದಿವಸಂ ಧನಶ್ರೀ ಕನಸುಗಂಡು ನೇಸಱ್ ಮೂಡುವುದು ವೆಟ್ಟಿತ್ತರ್ ಗುಣಪಾಲಸೆಟ್ಟಿಗಱಿಪುವುದುಂ. ಸೆಟ್ಟಿ ತತ್ಸ್ವಪ್ನ ಫಲಂಗಳಂ ಋಷಿಯರಲ್ಲಿ ಬೆಸಗೊಳ್ವ[1]ವೆಂದು ಬಸದಿಗೆ[2] ಬಂದು ಋಷಿಯರುಮಂ ವಂದಿಸಿ ಕನಸುಗಳ ಫಲಮಂ ಬೆಸಗೊಳ್ವುದುಂ ಅವರ್ 'ಅಧಿಕಜಿನಭಕ್ತನಂ ಮಹಾಪ್ರಭುವಂ ಮನೋಜನಿಭನಂ ಮಗನಂ ಪಡೆವೈ' ಎಂಬುದುಂ ಇರ್ವರುಂ ಸಂತಸದಂತಮನೆಯ್ದಿ ಮನೆಗೆ ವಂದಿರ್ಪುದುಂ ಧನಶ್ರೀಗೆ ಗರ್ಭಮಾಗಿ ಜಿನೇಂದ್ರ ಪೂಜೆಯುಂ ಮಾಡಲುಂ ನೋಡಲುಂ, ಜಿನಮುನಿವರರಂ ವಂದಿಸಲುಂ ತ್ರಿಷಷ್ಟಿಶಲಾಕಾಪುರುಷರ ಕಥೆಗಳಂ ಕೇಳಲುಂ ಬಯಕೆ ತಿಣ್ಣಮಾಗೆ[3] ಜಿನಭವನಂಗಳೊಳ್ ನಾನಾವಿಧ ರಂಗವಲ್ಲಿಯನಿಕ್ಕಿಸುತ್ತುಂ ಪೊನ್ನಿಂ ಸಮೆದ ವಂಶಮಾಲೆಗಳಂ[4] ಕಟ್ಟಿಸುತ್ತುಂ ನಾನಾಧ್ವಜಂಗಳನೆತ್ತಿಸುತ್ತುಂ ದಾನಮುಂ ಮಾಡಿಸುತ್ತುಂ ಧನಶ್ರೀಯು ಬಯಕೆಯುನೀ ಮಾರ್ಗದಿಂ ಸಲಿಸುತ್ತುಮಿರ್ಪುದುಂ ಒಂದು ದಿವಸಂ, ವಿಶ್ವಂಧರ ಮಹಾರಾಜಂ ಮಹಾವಿಭೂತಿಯಿಂ ಗಂಧಗಜಾರೂಢನಾಗಿ ವನಕ್ರೀಡೆಗೆ ಪೋಗುತ್ತುಂ ತನ್ನ ನಂದನವನದೊಳ್ ಪೊನ್ನುಯ್ಯಾಲನಾಡುವ ಸುಬಂಧುಶ್ರೀಯುಂ ಕಾಣ್ಬುದುಂ ಕಾಮಂ ಕಾಮಿನಿಯುಂ ಮಱೆಗೊಂಡಿರ್ದ ಪೊಸನನೆಯ[5] ಬಿರಿಮುಗುಳ ಕುಸುಮಬಾಣಂಗಳಂ ತೋಡುಂ ಬೀಡುಂ ಕಾಣಬಾರದೆನಿಸಿ ನೆಜನಱಿದೆಸೆವುದುಂ ಮಹಾರಾಜಂ ಜರ್ಝರಿತ ಗಾತ್ರನಾಗಿ

---

1 ಕೇಳೋಣ 2 ಜೈನದೇವಸ್ಥಾನ 3 ಹೆಚ್ಚಾಗಲು 4 ತೋರಣ 5 ಮೊಗ್ಗು.

ಚಿತ್ರದ ರೂಪಿನಂತೆ ಮಿಟ್ಟನೆ ಮಿಡುಕದೆ ನಿಂದು ವಿರಹಾನಳನಿಂ ಬೆಂದು ವನಕ್ರೀಡೆಗೆ ಪೋಗಲೊಲ್ಲದೆ ಅರಮನೆಗೆ ಬಂದು ಕಣ್ಣೊಳಂ ಮನದೊಳಂ ಸುಬಂಧುಶ್ರೀಯ ರೂಪೆ ತೋಱುತಿ ರ್ಪ ಕಾಮಸಂತಾಪಮನೆಂತುಂ ಮಾಣಿಸಲಾಱದೆ ಪೆರ್ಗಡೆಗಳಂ ಕರೆದು 'ನೀವಿಂದು ಸುಬಂಧುವಂ ಎನ್ನೊಳ್ ನೆರಪುವುದು ನೆರಪದಂದು ನೋವೆಂ ತಿಬ್ಬಂ' ಎಂದು ಗುಣಪಾಲಸೆಟ್ಟಿಯಲ್ಲಿ ಗಟ್ಟುವುದುಂ ಅವರ್ ಸೆಟ್ಟಿಯ ಮನೆಗೆ ವಂದಿಂತೆಂದರ್ 'ನಿಮ್ಮ ಮಗಳಪ್ಪ ಸುಬಂಧುಶ್ರೀಯುಂ ನಂದನ ವನದೊಳ್ ವಿಶ್ವಂಧರ ಮಹಾರಾಜಂ ಕಂಡು ಕುಸುಮಶರದ ಕೋಳಿಂ[1] ಗಿರಲಾಱದೆ ಬೇಡಿಯಟ್ಟಿದಂ ನೀವುಂ ಕುಲಸ್ವಾಮಿಗೆ ಮಾರ್ಕೊ ಳ್ಳದೆ ಕೂಸಂ ಕುಡುವುದೆಂಬುದುಂ ಗುಣಪಾಲಸೆಟ್ಟಿ ಬೆಱಗಾಗಿ ಕೃತಕ ವಚನಂಗಳಿಂ ನಂಬೆ ನುಡಿದು ಪೆರ್ಗಡೆಗಳನರಮನೆಗೆ ಕಟಿಪಿ ತನ್ನೊಳಿಂತೆಂದಂ

'ಜನಪದಸೇವೆಯಿಲ್ಲದನ ರೂಪು ವಿಳಾಸ ಮನೋನ್ನತಿಕ್ಕೆ ಮೇ
ದಿನಿ[2] ಸೊಬಗೊಳ್ಪು ತೇಜ ಮಹಿಮಾಸ್ಪದಮುದ್ಧತಿ ವಿದ್ಯೆ ಶೌಚಮಾ
ತನ ವಿಭವಂ ಕುಲಂ ಬಲಮುಮಾರ್ಪು ಗುಣಾಳಿ ಗಾಡಿ[3] ಯೌ
ವನಮಿನಿತುಂ ಕುಱುಂಬ[4] ನರಸಗ್ನಿಯ ತಣ್ಪು ವಿಷಾನ್ನಭೋಜನಂ

ಮತ್ತಂ ಮಿಥ್ಯಾದೃಷ್ಟಿಯ ಸಿರಿಯನಱಿಯೆಂದು ಬೆಚ್ಚಲುಂ ಕುದೃಷ್ಟಿಯ ರೂಪು ಸಂತಾಪವೆಂದು ನಡುಗಲುಂ ದರ್ಶನ ದೂರನ ಶೃಂಗಾರಮಂ ಸಂಹಾರಮೆಂದು ಭಯಂಗೊಳಲುಂ ಶ್ರಾವಕಂಗೆ ಬೇಟ್ಪುದು. ಮಿಥ್ಯಾದೃಷ್ಟಿಯಪ್ಪನ ರೂಪುಮಂ ವಿಳಾಸಮುಮಂ ಪ್ರತಾಪಮುಮಂ ಸಂಪತ್ತುಮಂ ಕಂಡು ರಾಗಿಸಿ ಕೂಸು ಗುಡುವಂ ನರಕಕ್ಕೆ ಭಾಜನಮಕ್ಕುಂ,' ಎಂದು

1 ತೊಂದರೆ 2 ಭೂಮಿ 3 ಸೌಂದರ್ಯ 4 ಕುರುಬ.

ಭಾವಿಸಿ ಧನಶ್ರೀಯ ಮನದ ನಿರ್ಮಳಿಕೆಯುಮಂ ಸಮ್ಯಕ್ತ್ವ ಮುಮನಾರಯಲೆಂದು ಗುಣಪಾಲಸೆಟ್ಟಿಯಿಂತೆಂದಂ

'ಧರಣೀವಲ್ಲಭನುಗ್ರವೈರಿಹರಣಂ ಬಾಲಾರ್ಕತೇಜಂ ಮಹೀ
ಶ್ವರವಂದ್ಯಂ ಮನವೊಲ್ದು ಸೋಲ್ತು ಪದಪಿಂ ಸದ್ರಾಗದಿಂದಟ್ಟಿದಂ
ಪಿರಿದುಂ ಸ್ನೇಹದಿನಿಂದು ಕೇಳ್ ಕನಕಾಂಭೋಜಾಕ್ಷಿಯುಂ ಬೇಡಿ ನ
ಮ್ಮರಸಂ ನೋಡ ಸುಬಂಧುವಂ ಧರಣಿಯೊಳ್ ನಮ್ಮಂತು
ಮುಂ ನೋಂತರಾರ್

ಪರದರ[1] ಸಿರಿಯಿಂದರಸರ
ಸಿರಿ ಸರಿಯಲ್ಲದೊಡೆ ಕೂಸನಿತ್ತೊಡಾತನ ದೆಸೆಯಿಂ
ಪಿರಿದಪ್ಪುದವಿದ ಶೌರ್ಯಂ
ದೊರೆಕೊಳ್ಗುಂ ದೇಳೆ ರಾಜ್ಯಮುಂ ಕೈಸಾರ್ಗುಂ

ಸುಬಂಧುಶ್ರೀಯನವಸಂಗೆ ಕುಡುವಂ, ಎಂಬುದುಂ ಧನಶ್ರೀ ಸೆಟ್ಟಿಯ ಮಾತಿಂಗೆ ವಿಸ್ಮಯಂಬಟ್ಟು ನೀರೊಳಗಿರ್ದ ನಲ್ಲಳ ನೆೞಲಂ ಕಂಡು ನಲ್ಲಳೆಂದು ಮತಿಗೆಟ್ಟು ಪಾಯ್ದು ಸಾವ ಸಾಧುವಿಟನಂತೆ ನಿತ್ಯಮಲ್ಲದ ಸಂಸಾರ ಸುಖಕ್ಕಂ ಅಲ್ಪಶ್ರೀ ಗಮಾಸೆ ಗೆಯ್ದು ಮಿಥ್ಯಾದೃಷ್ಟಿಗೆ ಕೂಸಂಕೊಟ್ಟು ನರಕ ದುಃಖಮಂ ಮಾಡಿಕೊಂಡಪನೆಂದು ಮಱುಗಿ ಸೆಟ್ಟಿಗಿಂತೆಂದಳ್

'ಸಿರಿ ಭಾವಿಪ್ಪೊಡೆತ್ತಾನು
ದೊರೆಕೊಳ್ಗುಂ ಜೈನದರ್ಶನಂ ಧಾರಿಣಿಯೊಳ್
ದೊರೆಕೊಳ್ಳದದಱಿನಱಿವೊಡೆ
ಸಿರಿಗಂ ಸದ್ದರ್ಶನಕ್ಕಮೇನಂತರಮೋ

ಕಲ್ಲುಂ ಕಬ್ಬುನಮುಂ[2]ನೋ
ಡೆಲ್ಲಿಯುಮೋರಂತೆ ಪಡೆಯಲಪ್ಪುದು ಪೊನ್ನಂ
ಸಲ್ಲಲಿತಮಪ್ಪ ರತ್ನಮ
ನೆಲ್ಲಿಯುಮೋರಂತೆ ಪಡೆಯಲಪ್ಪು ದೆ ಧರೆಯೊಳ್'

1 ವರ್ತಕ   2 ಕಬ್ಬಿಣ

ಸಂಸಾರದಲ್ಲಿಸಿರಿಗೆ ಆಳಿಪಿ ಮೂಱು ದಿನದ ಪ್ರಕರಣಕ್ಕೆ[1] ಗಡ್ಡವಿೞಿಸೆ ಮಂಡೆಯಂ ಬೋೞಿಸಿಕೊಳ್ವಂತೆ, ಮುಂದಿರ್ದ ಕೆಱೆಯನೆಯ್ದಲಾಱದೆಲಸಿ ಕೆಸಱ ನೀರಂ ಕುಡಿಯುವಂತೆ ಸ್ವರ್ಗ ಮೋಕ್ಷದೊಳಪ್ಪನಂತ ಸುಖಮಂ ನೀರೊಳೞ್ದು ನರಕ ತಿರ್ಯಗ್ಗತಿಗಳೊಳ್ ತಿಱ್ರನೆ ತಿರಿವ ಕಜ್ಜಮನೆತ್ತಿಕೊಳ್ವೊಡೆ ನೀ ಮಱಿವಿರ್; ನಿಮಗಾದಿತ್ಯಂಗೆ ಸೊಡರಂ ತೋಱಿಸಿದ ರೆಂಬಂತೆ' ತೊಱೆಗೆ ನೀರನಡಕಿದರೆಂಬಂತೆ ಎನ್ನಂತಪ್ಪ ಜಡ ಮತಿಗಳ್ ಬುದ್ಧಿವೇೞ್ವುದುಚಿತಮಲ್ಲದು; ಗಂಡನಿದಿರೊಳ್ ಪೆಂಡತಿ ನುಡಿಯಲಾಗದು, ವಿಚಾಱಿಕೊಟ್ಟರಪ್ಪೊಡೆ ಎಮಗೆ ಬಸದಿಯೆ ಶರಣೆಂದು ನುಡಿದು ಮಾಣ್ಬುದುಂ ದರ್ಶನ ಶುದ್ಧಿಯುಂ ಸದ್ಧರ್ಮ ಸಮೇತೆಯುಮಪ್ಪ ಪೆಂಡತಿಯಂ ನಚ್ಚಿ ಕೂರ್ತು ಕೈಕೊಂಡಾತಂ ಬಲ್ಬೆತ್ತಮನೇಱಿಪವನೆಂತು ಸಮುದ್ರದೊಳಾೞದೆ ಸುಖದಿಂ ಸಮುದ್ರದ ತಡಿಯನೆಯ್ದುಗುಂ ಅಂತೆ ಪೆಂಡಿರುಂ ತಾನುಂ ಸ್ವರ್ಗಮೋಕ್ಷಮನೆಯ್ದಿ ಪಿರಿದಪ್ಪ ಸುಖಮನೆಯ್ದುವರೆಂದು ಮನದೊಳೆ ಪೊಗೞ್ದು ಸುಬಂಧು ಶ್ರೀಯ ಸಮ್ಯಕ್ತ್ವಮುಮಂ ಅರಯಲೆಂದು ಮಗಳಂ ಕರೆದು ತೊಡೆಯನೇಱಿಸಿಕೊಂಡು ಕವಪು[2] ಕರ್ಚಿ ತಂಬುಲಮನಿಕ್ಕಿ ಗುಣಪಾಲಸೆಟ್ಟಿ ಮೆಲ್ಲನಿಂತೆಂದಂ

'ನಿನ್ನಂತು ಮಗಳೆ ಪುಣ್ಯ
ಕ್ಕಿನ್ನೋಂತವರಾರೊ ಮಾಳವೇಶ್ವರನದಟಿಂ
ಸನ್ನುತ ಗುಣಗಣ ನಿಳಯಂ
ನಿನ್ನಂ ತನಗರಸಿ ಮಾಡಿದಪ್ಪಂ ಪದೆಪಿಂ

---

1 ನಾಟಕ 2 ಕೆನ್ನೆ

ನೀನರಸಿಯಾದೆಯಪ್ಪೊಡೆ
ಮಾನವಪತಿ ನಿನಗೆ ಮುಖ್ಯಪದಮಂ ಕುಡುಗುಂ
ಶ್ರೀನಿಳಯೆಯಾಗಿ ಸುಖದಿಂ
ನೀನಿರ್ಪೈ ರಾಜ್ಯಲೀಲೆಯುಂ ಕ್ರೀಡಿಸುತುಂ'

ಎಂಬುದುಂ ಸುಬಂಧುಶ್ರೀ ತಂದೆಯ ಮಾತಿಂಗೆ ನಕ್ಕು 'ನಿಮ್ಮಂತಪ್ಪ ಮಹಾಪುರುಷರಿಂತಪ್ಪ ನಿರ್ಬುದ್ಧಿತನಮಂ ಮಾಡಲಾಗದು, ಈ ಶ್ರೀಗೆಱಗಿ ಧರ್ಮಮಂ ಬಿಡುವುದಾವ ಬುದ್ಧಿ, ಕಾಚಮಂ ಬಿಟ್ಟೋಡಂ ಪಿಡಿವ, ತಾಯುಂ ಬಿಟ್ಟು ರಕ್ಕಸಿಯುಂ ಪೊರ್ದುವ, ಭೂಪರಂ ಬಿಟ್ಟು ಪೊಲೆಯರಂ ಕೆಳೆಗೊಳ್ವ, ಕುದುರೆಯುನೊಲ್ಲದೆ ನಾಯನೇಱುವ, ಪಟ್ಟದಾನೆಯುಂ ಕೊಟ್ಟು ಕೋಡಗಮಂ ಕೊಳ್ವ, ನೆಲೆವಾೞಂ[1] ಬಿಟ್ಟು ತಿರಿದುಂಬ ಮರುಳಂ ಪೋಲಿಪ್ಪಂ. ಬೆಕ್ಕು ಪಾಲಂ ಕಾಣ್ಬುದಲ್ಲದೆ ಮೇಗೆ ಬಂದಡಸುವ ಬಡಿಗೆಯುಂ[2] ಕಾಣದು. ಅಂತೆ ಮೂರ್ಖರಪ್ಪರುಮಿಲ್ಲಿಯ ಸುಖಮನೆ ಶಾಶ್ವತಮಾಗಿ ಕಾಣ್ಬರಲ್ಲದೆ ನರಕದೊಳಾದ ಮಹಾದುಃಖಮನಱಿಯರ್. ಎನಗಿಂತಪ್ಪ ಮಾಯಾ ವಚನಗಳಿಂ ಮಕ್ಕಳ ಕೈಯ ಮಾಣಿಕಮಂ ಗುಗ್ಗುರಿಯುಂ ತೋಱಿ ನಂಬಿಸಿ ಕೊಳ್ವಂತೆ ಟಕ್ಕಿಕ್ಕಿ ಮಾತಾಡವೇಡ. ಜಿನಧರ್ಮಂ ಪ್ರಾಣಿಗಾಶ್ರಮಂ[3]. ಎನ್ನಂ ರಕ್ಷಿಸದೆ ಕರ್ಮರಾಜಂಗೆ ಮುಗುಳೆ ಪಿಡಿದೊಪ್ಪಿಸುವುದು ಪಾೞಿಯಲ್ಲದು.[4] ಎಂತುಂ ನಿಮಗೆನ್ನ ಮೇಲೆ ಮುಳಿಸುಳ್ಳೊಡೆ ನಿಮಗೆ ಮೆಚ್ಚಿದ ದಂಡನೆಯುಂ ಮಾಡಿಂ. ಏಗೆಯ್ದುಂ ಮಿಥ್ಯಾದೃಷ್ಟಿಗೆ ಕುಡುವೆವೆಂಬ ಬಗೆಯುಂ ಮಾಣ್ಬುದು, ಎಂದು ಕಣ್ಣನೀರಂ ನೆಗಪುವುದುಂ ಗುಣಪಾಲಸೆಟ್ಟಿ ಮನದೊಳ್

1 ಸ್ಥಿರವಾದ ಬದುಕು 2 ಕೋಲು 3 ಆಶ್ರಯ 4 ಯೋಗ್ಯವಲ್ಲ

ಎನ್ನ ಗುಣಕ್ಕಂ ಬಗೆವಂ
ದೆನ್ನ ವಧೂಟಿಯ ಗುಣಕ್ಕಮೀಕೆಯಗುಣಮು
ತ್ಯುನ್ನತಮೆನಿಸಿದುದದಱಿಂ
ದೆನ್ನಂತಾರ್ ಪುಣ್ಯವಂತರವನೀತಳದೊಳ್

ಎಂದು ತನ್ನ ಮನದ ಕಾರ್ಯಮನಿರ್ವರ್ಗಂ ತಿಳಿಯೆ ಪೇೞ್ದು

ತಡೆದಿಲ್ಲಿ ನಿಂದೆನಪ್ಪೊಡೆ
ಕುಡಮೇೞ್ಕುಂ ಭೂಭುಜರಿಗೆ ಮಗವಂ, ಕೂಸಂ
ಕಡುಗೂರ್ತು ಕೊಟ್ಟೆನಪ್ಪೊಡೆ
ಕಿಡುಗುಂ ಮೇಲಪ್ಪ ನಮ್ಮ ಮೋಕ್ಷದ ಸೌಖ್ಯಂ

ಎಂದಾಲೋಚಿಸಿ ಧನಶ್ರೀ ಗರ್ಭಿಣಿಯುಪ್ಪ ಕಾರಣದಿಂ ತನ್ನ ಪ್ರಾಣಮಿತ್ರನಪ್ಪ ಶ್ರೀದತ್ತನೆಂಬ ಪರದನ ಮನೆಯೊಳ್ ಗುಪ್ತದಿಂದಿರಿಸಿ ನೂಱೆಂಟು ಕೋಟಿ ಪೊನ್ನುಮಂ ಬಿಸುಟ್ಟು ಮಗಳನೊಡಗೊಂಡು ಪುರದಿಂ ಪೊಱಮಟ್ಟು ಕೌಶಾಂಬಿಯೆಂಬ ಪುರಮನೆಯ್ದಿ ಸಂತಸದಿಂದಮಿರ್ದನ್. ಇತ್ತಲರಸಂ ಗುಣಪಾಲ ಸೆಟ್ಟಿ ಪೋದನೆಂಬುದಂ ಕೇಳ್ದು ಬೆಱಗಾಗಿ

ಸುತೆಯಂ ಕೊಟ್ಟೆನಗಖಿಳ
ಕ್ಷಿತಿಯುಮನಾಳ್ದಿರದೆ ಸುಖದಿನತಿಚಪಳಂ ದು
ರ್ಮತಿಯಾಗಿ ಬೆಚ್ಚಿ ಪೋಪೊಂ
ದತಿಶಯಮೇಕಿಂತು ಪುಣ್ಯಹೀನರುಮೊಳರೇ

ಎಂದು ಹಾಸ್ಯಂ ಮಾಡಿ ನಗುವರಸಂಗೆ, ಧರ್ಮದ ಮೋಹದಿಂ ಶ್ರೀಯುಮಂ ಸಂಪತ್ತುಮಂ ಉದಾಸೀನಂಮಾಡಿ ಕುಡಲೊಲ್ಲದೆ ಪೋದನೆಂಬುದುಂ ಮಹಾರಾಜಂ ಚೋದ್ಯಂಬಟ್ಟು[1] ಆತಂ ನಂಬಿರ್ದುದೆ ದೈವಂ ವೈಶ್ಯವಂಶತಿಳಕಂ ಪಿಡಿದಿರ್ದುದೆ ಧರ್ಮ

1 ಆಶ್ಚರ್ಯ

ಮೆಂದು ನಚ್ಚಿದನ್. ಗುಣಪಾಲಸೆಟ್ಟಿಯು ಮೇಲೆ ಮೋಹಮುಂ ಸ್ನೇಹಮುಮಾಗೆ ಅಱಿಸಿ ತನ್ನಿರೆಂಬು ಪರಿಚಾರಕರನಟ್ಟಿದನ್.

ಇತ್ತ ಧನಶ್ರೀ ಮನಮಂ ಸಂತೈಸಿಕೊಂಡು ಕೆಲವು ದಿವಸ ಮಿರ್ಪುದುಂ ಒಂದು ದಿವಸಂ ಶಿವಗುಪ್ತರೆಂಬಾಚಾರ್ಯರ್ ತ್ರಿಗುಪ್ತರೆಂಬ ತಮ್ಮ ಶಿಷ್ಯರ್ವೆರಸು ಚರಿಗೆಗೆವರ್ಪುದುಂ ಶ್ರೀ ದತ್ತಸೆಟ್ಟಿ ಕಂಡು ನಿಲಿಸಿ

ಪದಹಿಂ ಶುದ್ಧಾನ್ನಮನೀ
ವುದುಮುಂಡು ಮುನೀಂದ್ರರಿರ್ಪರಂ ಕುಳ್ಳಿರೆ ಸಂ
ಮುದದಿಂ ಮುನೀಂದ್ರ ವಂದ್ಯನ
ಪದಯುಗಳಮನೊತ್ತುತಿರ್ದ ನಿರ್ಪನ್ನೆವರಂ

ಧನಶ್ರೀ ವಂದಿಸಿ ಪೋಪುದುಂ ತ್ರಿಗುಪ್ತಮುನೀಂದ್ರಂ ವಿಸ್ಮಯಂಬಟ್ಟು ಶಿವಗುಪ್ತಭಟ್ಟಾರಕರ್ಗೆ ವಿನಯದಿಂದಿಂತೆಂದಂ

ಈವನಜಾಸ್ಯೆಗುತ್ತಮಗುಣಾನ್ವಿತೆಗಗ್ಗಳಭದ್ರಲಕ್ಷಣಂ
ತೀವಿದುಮೈದೆ ಭಾವಿಸುವೊಡೆಲ್ಲೆಡೆಯುಂ ನೆರೆದೊಪ್ಪೆ ಚೆಲ್ವಿನಿಂ
ಶ್ರೀವಧುವನ್ನಳನ್ನಳಿನಿಜೀವಧುವುಂ ಕಡುಕಂದಿ ಕುಂದಿಸ
ದ್ಭಾವಮನೊಕ್ಕು[1] ಹೀನರವೊಲನ್ಯನಿವಾಸದೊಳಿರ್ಪುದಾರಿದೇಂ

ಎಂಬುದುಂ ಶಿವಗುಪ್ತರಿಂತೆಂದರ್

ಅಂತೆನವೇಡ ಧಾರಿಣಿಯೊಳೀ ಲಲಿತಾಂಗಿಯೆ ಪುಣ್ಯವಂತೆ ಭೂ
ಕಾಂತನದುತ್ತರ್ತ ತನ್ನ ಮಗಳಂ ಕುಡುವೇಟ್ಕಿನಲೀಕೆಯಾಣ್ಮನೋ
ರಂತೆ ಜಿನೇಂದ್ರಧರ್ಮಯುತನಲ್ಲದವಂಗೆ ಮಮಾತ್ಮಜಾತೆಯಂ
ಸಂತತಮೀಯೆನೆಂದು ಬಿಸುಟಗ್ಗದ ಧಾನ್ಯಧನಂ ಗೃಹಂಗಳಂ

ಪೋಗುತ್ತುಮಿಾ ವನಿತೆ ಗರ್ಭಿಣಿಯುಪ್ಪುದಱಿಂದೊಡಗೊಂಡು ಪೋಗಲೊಲ್ಲದೆ ಶ್ರೀದತ್ತಸೆಟ್ಟಿ ತನಗಿಪ್ಪನಪ್ಪುದಱಿಂ

1 ಬಿಟ್ಟು

ದಲ್ಲಿ ಗುಪ್ತದೊಳಿರಿಸಿ ಪೋದನ್. ಇಂತೀ ಧನಶ್ರೀಯ ಗರ್ಭದ ಕೂಸೀಮಂಡಲಕ್ಕೆಲ್ಲಮೊಡೆಯ[1] ನಕ್ಕುಮೆಂದು ತಮ್ಮೊಳ್ ನುಡಿದು ಪೋಪುದುಂ ಶ್ರೀದತ್ತಸೆಟ್ಟಿ ಕೇಳ್ದು ಕಾರಣಮಿಲ್ಲದೆ ಮುಳಿದು

ಈ ಸಸಿವದನೆಯ ಗರ್ಭದ
ಕೂಸೀ ದೇಶಕ್ಕೆ ಮುಖ್ಯನಪ್ಪಂ ಗಡ ನಾ
ನಾ ಸಿಸುಮನುಪಾಯದೊಳೆ ವಿ
ನಾಶಂ ಮಾಡಲ್ಕೆವೇೞ್ಕುಮೆಂದತಿ ಮುಳಿಸಿಂ

ಪೂರ್ವವೈರಮುಂಟಪ್ಪುದಱಿಂ ಮಸಗಿ[2] ಕೃತಕದಿ ನಿರ್ವರ್ ತೊೞ್ತಿರನೀ ಧನಶ್ರೀ ಪೆಱಲೊಡನೆಮಗಱಿಪಿಮೆಂದು ಕಲಿಸಿ ಕೂರ್ಪರಂತೀ ಧನಶ್ರೀಗೆ ಸಂಘಾತಮಾಗಿರಿ ಮೆಂದಿರಿಸುವುದುಂ ಧನಶ್ರೀ ನವಮಾಸಂ ನೆಱೆದು ಗಂಡು ಗೂಸಂ ಪೆಱುವುದುಂ ಮುನ್ನಮಿರಿಸಿದ ತೊೞ್ತಿ[3]ರಿರ್ವರುಂ ಪರಿತಂದು ಶ್ರೀದತ್ತಸೆಟ್ಟಿಗಱಿಪುವುದುಂ ಪರಿತಂದು ಕೃತಕದಿನಾಗಳ್

ಕುವಳಯನೇತ್ರೆಗೆ ಗರ್ಭ
ಸ್ರವಮಾದುದು ಕೆಟ್ಟೆನೆನಗೆ ಕೈಲೆಡೆ[4]ಯೆಂದೀ
ಧವಳಾಕ್ಷಿಯನಣ್ಣ ವಣಿ
ಗ್ಧವನಿರಿಸಿದನಕಟ ಪೊಲ್ಲದಾ[5]ಯ್ತೆಂದಾಗಳ್

ಧನಶ್ರೀಯುಂ ಪಾಸಿನ[6] ಮೇಲೆ ಪಟ್ಟಿರಿಸಿ ಕೂಸು ಸತ್ತು ದೆಂದು ಪುಸಿದು ಮೆಲ್ಲನೇಕಾಂತದೊಳೊರ್ವ ಕ್ರೂರನಪ್ಪ ಪೊಲೆ ಯಂಗೆ ಸಾಲ್ವನಿತು ಪೊನ್ನಂ ಕೊಟ್ಟು ಕೊಲ್ಲೆಂದಾತನ ಕೈಯೊಳ್ ಕೊಟ್ಟು ಕಳೆದಿತ್ತಲ್ ಧನಶ್ರೀಯ ಮನದ ಸಂಕಲ್ಪಂ

1 ಒಡೆಯ 2 ಕೋಪಿಸಿ 3 ತೊತ್ತು 4 ಅಡವು 5 ಕೆಟ್ಟದ್ದು 6 ಹಾಸಿಗೆ

ಪೋಪಂತಾಗೆ ಮಾಯಾವಿಪ್ರಳಾಪಂಗೆಯ್ಯೆ ಧನಶ್ರೀ ಅವನ ಮನದ ಕಪಟಮನಱಿಯದೆ ದುಃಖಮನಾಱಿಸಲೆಂದಿಂತೆಂದಳ್

ಕಱಿದವರ್ಗೇಕೆ ಮುಬಲಿಪುದೇಕೆ ಪಲುಂಬುವುದೇಕೆ ಚಿತ್ತದೊಳ್
ಕೊಱಿವುದದೇಕೆ ಚಿಂತಿಸುವುದೇಕೆ ಬೞಲ್ವುದದೇಕೆ ದುಃಖದೊಳ್
ಮುಳುಗುವುದೇಕೆ ಬಾಯ್ವಿಡುವುದೇಕೆ ಕನಲ್ವುದದೇಕೆ ಶೋಕದೊಳ್
ಮಱುಮಿಸು[1]ತಿರ್ಪುದೇಕೆ ಬಗೆಗೆಟ್ಟು ಬೞಲ್ವುದದೇಕೆ ಸೋವುದೋ

ಬೇಡೆಂದು ಮಾಣಿಸುವುದುಂ ಮಾಯಾ ವಿಪ್ರಳಾಪಮುಂ ಮಾಣ್ದು ಋಷಿಯುಱ ವಚನಮಂ ಪುಸಿಮಾಡಿದರ್ದೆಯುಂ ನೀವಿಕೊಂಡು ಮಗುವು ಸತ್ತುದೆಂದು ರಾಗಿಸಿರ್ದನಿತ್ತಲ್ ಪೊಲೆಯುಂ ಪಸುಗೂಸಂ ನಿರ್ಮನುಷ್ಯಮಪ್ಪಡವಿಗೊಯ್ದು ಗಂಟಲಂ ಮುಱಿದು ಕೊಲ್ವೆನೆಂದು ಮಗವಂ ನೋಡುವುದು.

ಅರುಣತೆಯಿಂದಮೊಪ್ಪುವಧರಂ ಕವಕಚ್ಛವಿ ನೀಳ್ದ ಬಾಹು ಪಂ
ಕರುಹಮುಖಂ ನಿಮಿರ್ಕೆವಡೆದೊಪ್ಪುವ ನಾಭಿ ನೊಸಲ್ ಪೊದಳ್ದ ಭಾ
ಸುರತರಕೆಂಪಿನಿಂದೆಸೆವಪಾಣಿತಳಂ ನಸುಗೆಂಪನಾಳ್ದ ಸ
ತ್ತರಳ ವಿಲೋಚನೋದಯಮಗಲ್ತುರಮುನ್ನತಿವೆತ್ತ ಮಸ್ತಕಂ

ಸೊಗಯಿಸಿ ತೋಱೆ[3] ಕರಂ ಮಿಗೆ
ಮೊಗಮಂ ನೋಡುತ್ತೆ ನಲಿವ ಶಿಶುವಂ ಪೊಲೆಯಂ
ಮಿಗೆ ನೋಡಿ ತನ್ನೊಳ್
ಬಗೆದಂ ದಯೆಪುಟ್ಟೆ ಮೋಹಮೊದವಿರೆ ಮನದೊಳ್

ಕೊಲೆಯನುಡುಗಿ ಒಂದು ಪಳ್ಳದೊಳ್ ಮಱಲಂ ಬಗೆದು ಮಾವಿನೆಳದಳಿರ್ಗಳಂ ಪಾಸಿ ಕೂಸನಲ್ಲಿ ಪಟ್ಟಿರಿಸಿ[2] ನಾನೇಕೆ ಪಾಪಮಂ ಮಾಡಿಕೊಳ್ವೆನೆಂದುಸಿರದೆ ಪೋದನನ್ನೆಗಂ ಇತ್ತಲಾ ತನ್ನ ಪುಣ್ಯಮೆ ಬರ್ಪಂತೆ ಶ್ರೀದತ್ತಸೆಟ್ಟಿಯ ಮೈದುನನಿಂದ್ರದತ್ತಸೆಟ್ಟಿ ಅಲ್ಲಿ ಬಿಟ್ಟಿರ್ಪುದಂ ಆತನ ಬೀಡಿನವರ್ ಇಂಧನಾರ್ಥ

1 ಅಳು 2 ಮಲಗಿಸಿ

ಮತ್ತಿತ್ತ ತೊಟಿಲುತ್ತಮೆಳದಳಿರ ಮೇಲೆ ಪಟ್ಟಿರ್ದ ನಲಿವ ಶಿಶುವಂ ಕಂಡು ಕೂಸಂ ನಿಧಾನಮನೆತ್ತುವಂತೆತ್ತಿಕೊಂಡು ಬಂದಿಂದ್ರದತ್ತಸೆಟ್ಟಿಗೊಪ್ಪಿಸುವುದುಂ ತನಗೆ ಮಕ್ಕಳಿಲ್ಲದುದಱಿಂ ತನ್ನ ಭಾರ್ಯೆ ಶ್ರೀದತ್ತನ ತಂಗೆಯಪ್ಪ ರಾಧೆಯುಂ ಕರೆದು ನಿನಗೆ ಪುತ್ರಲಾಭಮಾಯ್ತೆಂದು ಶಿಶುವಂ ಕೊಟ್ಟು ಕೂಸಂ ತಂದವರ್ಗೆ ಗುಪ್ತದಿಂ ಬೇಡ್ಪನಿತು ಪೊನ್ನಂ ಕೊಟ್ಟು ಸೆಟ್ಟಿತಿ ಗೂಢಗರ್ಭದಿಂ ಗಂಡುಗೂಸಂ ಪೆತ್ತಳೆಂದೊಸಗೆಯುಮಂ ಜಿನಾಭಿಷೇಕ ಪೂಜೆಯುಮಂ ಮಾಡಿ ಸಂತೋಷದಿಂದಿರ್ಪುದುಂ (ಇದಂ ಶ್ರೀದತ್ತಸೆಟ್ಟಿ) ತೊಟ್ಟನೆ ಕೇಳ್ದು ಎನ್ನ ತಂಗೆಯಪ್ಪ ರಾಧೆಗೆ ಗರ್ಭಮಿಂದುವರಮಿಲ್ಲೆಂಬುದನಿಂಬಾಗಿ ಬಲ್ಲೆಂ ಭೋಂಕನೆ ಮಗನಂ ಪಡೆದಳೆಂಬ ಮಾತಾದುದು ಧನಶ್ರೀಯ ಮಗನಕ್ಕುಮೋ ವಿಪರೀತಮಿದನಾರ್ಪೆನೆಂದು ತಂಗೆಯಮನೆಗೆ ವಂದು ಶಿಶುವಂ ಕಂಡಱಿದು ಕಲ್ಲಂ ತಾಗಿದ ಮಿಂಟೆ[1] ಯಂತೆ ಮುಟ್ಟುಗೆಟ್ಟು, ಬೇಪಗೆಯೊಳುಪ್ಪಂ ತಿಂದನಂತೆ ಮಲ್ಮಲಂ ಮಱುಗಿ ರಾಧೆಗೆ ಗರ್ಭಮಿಲ್ಲೆಂಬುದಂ ಬಲ್ಲೆನಿದೆನಗಾಶ್ಚರ್ಯ ಮಾದಪುದಿದನೆನಗಱಿವಂತಾಗೆ ಪೇಟಿಮೆನೆ ಡಿಟಮಿಾತನೆನಗೆ ಕೂರ್ಪನೆಂದು ಪೇೞೆ ರಾಧೆಯ ಮಾತಂ ಕೇಳ್ದು ಪಿರಿದಪ್ಪುತ್ಸಾಹಮಂ ಮಾಡವೇಟ್ಪುದೆಂದು ಇಂದ್ರದತ್ತಸೆಟ್ಟಿಯುಮನೊಡಂಬಡಿಸಿ ರಾಧೆಯುಮಂ ಕೂಸುಮನುಜ್ಜಯಿನಿಗೊಡಗೊಂಡು ಬಂದು ಕಪಟೋತ್ಸಾಹಮಂ ಮಾಡಿ ಕೆಲವು ದಿವಸಂಬಱಿಕ್ಕೆ ನಿಷ್ಕಾರಣಪ್ಪೂರ್ವ ಮಾದಗಂಗೆ ಪಿರಿದಪ್ಪರ್ಥಮಂ ಕೊಟ್ಟೊಡಂಬಡಿಸಿ ಕೂಸು ಸತ್ತಿತೆಂದು ಮಾಡಿ ಮಾಯಾಪ್ರಳಾಪಮಂ ಪಣ್ಣಿ[2]

---

1 ಹೆಂಟೆ 2 ಮಾಡಿ

ಕಂದರ್ಪನಿಭಂ ತಂಗೆಗೆ
ನಂದನನುದಯಾರ್ಕತೇಜನಾದಂ ಲೇಸಾ
ಯ್ತೆಂದಿರ್ದನೆನ್ನ ತನು ದ
ಳ್ಳಿಂದುರಿದುಪೋದಪ್ಪದೀಗಳೆತ್ತ ಪೋಪೆನೊ ಕಱುವೇ

ಎಂದು ಕೃತಕದಿಂ ಪ್ರಳಾಪಂಗೆಯ್ಯುತ್ತಿರ್ದನಿತ್ತಲ್ ಮಾದೆಗಂ ಕೂಸನಡವಿಗೊಯ್ದು ಗಂಟಲಂ ಮೆಟ್ಟಿ ಕೊಲ್ವೆನೆಂದು ಕೂಸಂ ಪೆಗಲಿಂ ನೆಲಕ್ಕಿೞಿಪುದುಂ ಇೞಿಯಲೊಲ್ಲದೆ ಮಾದೆಗನ ಪಱಿಗಡ್ಡಮಂ ಎಡಗಯ್ಯೊಳ್ ಪಿಡಿದು ಬಲದ ಕೈಯೊಳ್ ಮೊಗಮಂ ಪೊಯ್ಯುತ್ತುಂ ಕುಂಕುಮದುಂಡೆಯನನುಕರಿಸಿರ್ದ ಮುಷ್ಟಿಗಳಿಂದಿರ್ದೆಯುನೊದೆಯುತ್ತಮಿರೆ ದುರಾತ್ಮಂ ಶಿಶುವಿನ ರೂಪುಮಂ ಮುದ್ದಾಟಮುಮಂ ನೋಡಿ ಕರುಣಮುಂ ಸ್ನೇಹಮುಮಂ ತಿಣ್ಣಮಾಗೆ ಕೊಲಲಾಱದೆ ತೊಱೆಯ ಪುಳಿನಸ್ಥಳದೊಳ್ ಮಱಲ ಪಾಸಂ ಮಾಡಿ ಮೆಲ್ಲನಲ್ಲಿ ಪಟ್ಟಿರಿಸಿ ನಿನ್ನ ಮೆಚ್ಚಿದಂತಾಗೆಂದು ಪೋದನನ್ನೆಗಂ,

ತೊಱೆಯೊಳ್ ನೀರುಣಲೆಂದು ಬಂದು ತುಱುಗಳ್ ಪಟ್ಟಿರ್ದ[3] ಪೂರ್ಣೇಂದುವಂ
ನೆಱೆ[3] ಪೋಲ್ತುನ್ನತನು ಸುರೇಂದ್ರನಿಭನಂ ತದ್ಬಾಲನಂ ಕಂಡು ಮೂ
ಗಿಱಿಯುತ್ತುಂ ಕುಡಿವಾಲಮೆತ್ತಿ ಕೆನೆಯುತ್ತಾನಂದದಿಂ ಸುತ್ತಿ ಮು
ತ್ತಿಱಿದತ್ತಲವುಂಕಿ ಪೋಗದಿರೆ ಕಂಡೆಯ್ತಂದು ಗೋಪಾಲಕರ್

ಇದೇನಾನೊಂದಾಶ್ಚರ್ಯಮಾಗಲೆವೇೞ್ಕುಮೆಂದು ಬಳಸಿರ್ದ ಜೀವಧನಂಗಳಂ[4] ತೊಲಗಬಡಿದು ನೋೞ್ಪುದುಂ ಬಾಲಕನಂ ನಲಿಯುತಿರ್ದನಂ ಕಂಡು ನಮ್ಮಾಳ್ದಂಗೆ ಕುಡುವಮೆಂದು ಗೋಪಾಲರಾ ಶಿಶುವನೆತ್ತಿಕೊಂಡು ಬಂದು ಗೋವಿಂದನೆಂಬ

---

1 ಉಂಡೆ 2 ಹಿಮ್ಮುಡಿ 3 ಮಲಗಿದ್ದ 4 ದನ

ತುಱುಗಾಱಿಂಗೆ[1] ಕುಡುವುದುಮಾತಂ ಪೆಂಡತಿಯುಪ್ಪ ನಂದೆ[2]ಯೆಂಬ ತುಱುಗಾರ್ತಿಯುಂ ಕರೆದು ಮಗನಂ ಕೊಟ್ಟು ಕೂಸಿಂಗೆ ಧನಕೀರ್ತಿಯೆಂದು ಪೆಸರಿಟ್ಟು ನಡಪುತ್ತುಮಿರ್ಪುದುಂ ಶುಕ್ಲಪಕ್ಷದ ಚಂದ್ರನಂತೆ ಬಳೆದು

ಧನಕೀರ್ತಿಕುಮಾರಂ ಕಾ
ಮನಿಭಂ ತುಱುಪಟ್ಟಿ[2]ಗರಸನಾಗಿರ್ಪನೆಗಂ
ಮನವೊಲ್ದೊಂದುದಿನಂ ವೈ
ಶ್ಯನುತಂ ಶ್ರೀದತ್ತಸೆಟ್ಟಿ ಕರಮಾದರದಿಂ

ತನ್ನ ಮಗಳಪ್ಪ ಶ್ರೀಮತಿಯ ಮದುವೆಯುಂಮಾೞ್ಪೆನೆಂದು ತುಪ್ಪಮಂ ಕೊಳಲೆಂದು ತುಱುಪಟ್ಟಿಗೆವಂದು ಧನಕೀರ್ತಿಕುಮಾರನಂ ಕಂಡು

ಕೊಲ್ಲೆಂದಟ್ಟಿದೊಡಾತಂ
ಕೊಲ್ಲದೆ ಕಡುಕಷ್ಟನಾಗಿ ತುಱುಗಾರಂಗಿ
ತ್ತಲ್ಲಿಯುಮರ್ಥಮನೋವದೆ
ಮೆಲ್ಲನುಪಾರ್ಜಿಸಿದನಕ್ಕುಮತಿಲೋಭತೆಯಿಂ

ಆನೆಂತುಮೀವನಂ ಕೊಲ್ಲದೆ ಮಾಣೆನೆಂದು ಗೋವಿಂದನಂ ಬರಿಸಿ ಶ್ರೀದತ್ತನಿಂತೆಂದಂ

ಪಿರಿದಪ್ಪವಸರಮಾದುದು
ಭರವಶದಿಂದೆನ್ನಪುತ್ರನಲ್ಲಿಗೆ ಬೇಗಂ
ಬರೆದೋಲೆಯುಮನೀಗಳೆ ಚೆ
ಚ್ಚರದಿಂದಂ ಪೋಗಿ ಕುಡುವನಂ ತತ್ಕ್ಷಣದಿಂ

---

1 ದನಕಾಯುವವನು 2 ದನಕಾಯುವವರ ಹಳ್ಳಿ

ನೀಂ ಪೇೞ್ವುದು

ಮತ್ತಿನ ಬಂಟರೊಳಾಗದು
ಚಿತ್ರಜನೆಸಪ ನಿನ್ನ ಮಗನಂ ಸೌಂದ
ರ್ಯೋತ್ತಮನಂ ಧನಕೀರ್ತಿಯ
ನುತ್ತಮಗುಣ ಗಣನನಟ್ಟಿ ಪೇೞ್ವುದು[1] ಬೇಗಂ

ಎಂಬುದುಂ ಗೋವಿಂದಂ ಶ್ರೀದತ್ತಂ ಮುಂ ಕೂರ್ತು ಕೊಟ್ಟ ದ್ರವ್ಯಾದಿಗಳಂ ನೆನೆದು ತನೂಜನಂ ಪೋಗವೇೞ್ವುದುಂ ಮಾಯಾಪುಂಜನ್ ಏಕಾಂತಕ್ಕೆ ಪೋಗಿ

ಎನಗೆ ಕೂರ್ಪಡೆ ಬೇಗದಿಂ ತಡವಿಲ್ಲದಿಂದೆ ಮಹಾಬಲಾ
ಮನೆಯ ಪಿತ್ತಿಲೊಳೀತನಂ ಪಿಡಿದೊಯ್ದು ಭೋಂಕನೆ ಕೊಂದು ನೆ
ಟ್ಟನೆ ಪೆಱರ್ಗನುರಾಗದಿಂದಮೆ ಪೇೞದೊರ್ವರೆಯೆ ಗುಪ್ತದಿಂ
ಮನದೆಗೊಂಡುೞಿ[1] ಪೂೞ್ವುದೆಂದು[2] ಕಷಾಯದಿಂ ಬರೆದೋಲೆಯಂ

ಮುದ್ರಿಸಿ ಬೆಳಗಪ್ಪಜಾವದೊಳ್ ಧನಕೀರ್ತಿಯ ಕೈಯೊಳ್ ಕೊಟ್ಟಟ್ಟುವುದುಂ ಆತಂ ಪವನವೇಗದಿಂದುಜ್ಜಯಿನಿಗೆ ವಂದು ಪಥಶ್ರಾಂತನಾಗಿ ಸಿಂಪಾನದಿಯಂ ಪೊಕ್ಕುಮೆಯ್ಯಂ ಕರ್ಚಿ[3] ಕೊಂಡು ತನ್ನದೀತೀರದೊಳೊಪ್ಪುವ ಕೆಂದಳಿರ ಮಾವಿನ ಕೆಳಗೆ ಪಟ್ಟಿರ್ದನ್. ಅನ್ನೆಗಮಿತ್ತಲ್ ಮೃಗಸೇನೆಯೆಂಬ ಸೂಳೆ ಪೊತ್ತುವೋಗಿಂಗೆ ಕೆಳದಿಯರ್ವೆರಸು ಪೊೞಲಿಂ[4] ಪೊಱಮಟ್ಟು ಸಿಂಪಾನದಿಯ ತಡಿವಿಡಿದು ಬರುತ್ತುಂ ತಚ್ಚೂತ ಮಹೀಜಾತದ ಕೆಳಗೆ ಪಟ್ಟಿರ್ದನಂ ಕಂಡು ಕಳೆದ ಭವಮುಂ ಕಣ್ಣುೞಿದುದೆಂಬ ಮಾತಂ ದಿಟಂಮಾಡಿ ಸೋಗಿಲೊಳ್[5] ದೋರ್ಲೆಯಂ ಕಂಡು ತಾಂ ಜಾಣೆಯುಂ ಸಕಲಶಾಸ್ತ್ರ ಪ್ರವೀಣೆ

---

1 ಬೇಕು 2 ಹೂಳುವುದು 3 ತೊಳೆದು 4 ಊರಿನಿಂದ 5 ಮಡಲು

ಯುವಪ್ಪುದಱಿಂ ಮುದ್ರೆಯನೊಡೆದು ವಾಚಿಸಿ ಚಿಂತಾ ಕ್ರಾಂತೆಯಾಗಿ ಕುಮಾರನ ಮೋಹದಿಂ ಶ್ರೀದತ್ತಸಟ್ಟಿದೋಲೆಯಂ ಸೀಳ್ದು ನದಿಯೊಳಿಕ್ಕಿ ಮಾನಿಯಿಂದೋಲೆಯುಮಂ ಕಂಠ ಮುವಂ ಕರಿಸಿ 'ಮಹಾಬಲ ನನಗೆ ಕೂರ್ಪನಪ್ಪೊಡೆ ಈ ಪೋಲಿ ಗಂಡಾಕ್ಷಣದೊಳೆ ಶೀಘ್ರಂ ತನ್ನ ತಂಗೆಯಪ್ಪ ಶ್ರೀಮತಿ ಯನೀತನೊಳ್ ಕಡೆಯದಿಂದೆ ನೆರಪುವುದು. ಎನ್ನಾಣೆ ಕಡೆಗಣಿಸ ಬೇಡ' ಎಂದು ಬರೆದು ಮುನ್ನಿನಂತೋಲೆಯಂ ಮುದ್ರಿಸಿ ಧನಕೀರ್ತಿಯು ಸೋಗಿಲೊಳಿಕ್ಕಿ ಪೋದಳ್. ಕುಮಾರ ನೆಚ್ಚತ್ತು

ಪೊಟಿಲೊಳಗೆ ಬಂದು ವೈಶ್ಯನ
ನಿಳಯುಮನಾರಯ್ದು ಪೊಕ್ಕು ವೈಶ್ಯಾತ್ಮಜನಂ
ಬಲಯುತನಂ ಕಂಡು ಮಹಾ
ಬಲನಂ ಮಾತಾಡಿ ಮುನ್ನ ಮುಖವಾರ್ತೆಗಳಂ

ಶ್ರೀದತ್ತನಟ್ಟಿದೋಲೆಯ
ಸಾದರದಿಂದೀಯೆ ಕಳೆದುಕೊಂಡಂತದನ
ತ್ಯಾದರದಿಂ ಪೊಡೆಮಟ್ಟು
ಶ್ರೀದಯಿತಂ[1] ಬಿಟ್ಟು ನೋಡಿ ಸಂತಸದಿಂದಂ

ಕರಮೊಳ್ಳಿಕೆಯ್ದನಯ್ಯಂ
ಸ್ಮರಸದೃಶನನಿವನನೆನ್ನ ತಂಗೆಗೆ ವರನಾ
ಗಿರೆ ಮಾಡಿ ಬಗೆವೊಡೀಕೆಗೆ
ವರನೀತನೆ ತಕ್ಕನುೞಿದವರ್ ತಗರಿ[2]ಳಿಯೊಳ್

ಎಂದು ಶ್ರೀಮತಿಗಂ ಧನಕೀರ್ತಿಗಂ ಪಾಣಿಗ್ರಹಣಂ ಮಾಡಿ ಸುಖದಿರ್ಪುದುಂ ಶ್ರೀದತ್ತಸೆಟ್ಟಿ ತಱಿಪಟ್ಟೆಯಂ ಪೊಜಮ ಟ್ಟುಜ್ಜಯಿನಿಗೆವಂದು ತನ್ನ ಮನೆಯಂ ಪೊಕ್ಕು ತನ್ನ ಮಗಳ್ಗೆ ಮದುವೆಯಾದ ಧನಕೀರ್ತಿಯುಂ ಕಂಡು ಬೆಜಗಾಗಿ

---

1 ಐಶ್ವರ್ಯವಂತ 2 ಯೋಗ್ಯರಾಗುವುದಿಲ್ಲ

ಇಂತಲ್ಲದೆ ಕೊಲಬಾರದು
ಸಂತತಮೀ ಖಳನನೆಂದುಪಾಯದೊಳಾನೇ
ಕಾಂತದೊಳೋಲೆಯನಟ್ಟಿದೊ
ಡೀತಾಯದು ಪುಣ್ಯಮುಳ್ಳವರ್ ಸತ್ತಪರೇ !

ಎಂದು ಚಿಂತಿಸಿ ಶ್ರೀಮತಿ ರಂಡೆಯಾದೊಡಮಕ್ಕೆಂದು ಮತ್ತಂ

ಕ್ರೂರನಪ್ಪನೊರ್ವನಂ ಕ್ಷಣದಿಂ ತಳಾಱನ[1] ನಂಟನಂ
ಬೀರನಂ ಕರೆದೊಯ್ದುನಾತನ ಬೇಡಿದರ್ಥಮನಿತ್ತು ಸಂ
ಹಾರಿಸಿಂದುರಗಾಲಯಕ್ಕೆ[2] ನಿವೇದ್ಯಮಂ ಶುಚಿಯಾಗಿವಿ
ಸ್ತಾರದಿಂದಿರುಳ್ಗ ತಂದಪನಂ ವಿಚಾರಿಸದಾಕ್ಷಣಂ

ಎಂದು ನಾಗಾಲಯದೊಳಾತನನಿರಿಸಿ ಬಂದು ಮನೆಯವರ ನಱಿಯಲೀಯದೆ ಅಳಿಯನಪ್ಪ ಧನಕೀರ್ತಿಯಂ ಬೇಱೆ ಕರೆದು ನಾಗೇಂದ್ರಂಗೆ ನಿನ್ನಿಂದಮೆ ಚರುವ[3] ನಿಡಿಸುವೆನೆಂದು ಪರಸಿದೆ ನದಂ ನಾಗಾಲಯದ ಧರಣೇಂದ್ರಂಗೆ ತೋಱಿ ಬಾಯೆಂದು ಬೇಱೊಂದು ಮನೆಯೊಳಿರಿಸಿದ ಚರುಗಮಂ[4] ಕುಡುವುದುಂ, ಆತನಂ ಮಹಾಬಳನಿದಿರೊಳ್ ಕಂಡು ಎಲ್ಲಿಗೆ ಪೋದಪೆಯೆಂದು ಬೆಸೆಗೊಳ್ವುದುಂ ಧನಕೀರ್ತಿ ಮಾವಂ ಬೆಸಸಿದೊಡೆ ಪೋದಪೆ ನೆಂಬುದುಂ ಮಹಾಬಲಂ ತಮ್ಮಯ್ಯಂಗೆ ಮುನಿದು ಮೈದುನನ ಕೈಯ ಚರುವಂ ಕಳೆದುಕೊಂಡು ನಾಗಾಲಯಕ್ಕೆ ಒರ್ವನೆ ಬಂದು ಪುಗುವುದಂ [ಅವಂ] ಇಱಿದು ಕೊಂದು ಮಹಾಬಲನಂ ಓಡಿದನಂಜಿ ನಿರ್ದಯಂ, ಇತ್ತಲ್ ಧನಕೀರ್ತಿಯುಂ ಶ್ರೀದತ್ತ ಸೆಟ್ಟಿ ಕಂಡು ವಿಸ್ಮಯಂಬಟ್ಟು ಬೆಸಗೊಳ್ವುದುಂ ಧನಕೀರ್ತಿ ಎಮ್ಮ ಭಾವನುದಾರಗುಣಂ ಎನ್ನ ಕಯ್ಯ ಚರುವಂ ಕಳೆದು ಕೊಂಡು ನಾಗಾಲಯಕ್ಕೆ ಪೋದನೆಂಬುದುಂ ಪಾೞ್ವಸಿಱೊಳ್[5]

1 ತಳವಾರ 2 ನಾಗರಾಜನ ದೇವಸ್ಥಾನ 3 ಅನ್ನ 4 ಅನ್ನ
5 ಬರಿಹೊಟ್ಟೆ

ಸಾಸವೆಯುಂ ಕುಡಿದರಂತೆ ಮಱುಗಿ ಸುಂಟಿ ತಿಂದ ಬಾಯೊಳ್ ಬಿಸಿನೀರಂ ಕುಡಿದರಂತೆ ಮಿಡುಮಿಡುಕಿ

ಮಗನಂ ನೆನೆನೆನೆದಿರುಳುಂ
ಪಗಲುಂ ಪಂಬಲಿಸಿ ಮಱುಗಿ ಕಳ್ಳನ ತಾಯುಂ
ತಗಣಿತದುಃಖದಿನೊಳಗೊಳ
ಗೊಗೆದ ಮಹಾಶೋಕದಹನದಿಂ ಬೇಯುತ್ತುಂ

ಪಣ್ಣಿಂಗಿಟ್ಟೊಡೆ[1] ಕಾಯ್ ಬಿರ್ದುದೆಂಬ ನಾಣ್ಣುಡಿ ನುಡಿವವರ ಮಾತೆನಗಾದುದೆಂದು ಮೂಗಱ್ತಿಯುಱ್ತು[2] ಧನಕೀರ್ತಿಯ ಮೇಲೆ ತೀವ್ರಮಪ್ಪ ಮುನಿಸಾಗಿ [ಪೆಂಡತಿಯಪ್ಪ] ವಿಶಾಖೆಯುಂ ಕರೆದು ಏಕಾಂತದೊಳ್ ಧನಕೀರ್ತಿಯ ಪ್ರಪಂಚಮೆಲ್ಲಮನಱಿಪಿ ವಿಷಪ್ರಯೋಗದಿಂದೊರ್ವರುಮಱಿಯದಂತಿಂದು ನಾಳಿನೊಳಗೆ ಕೊಲಲ್ವೇೞ್ಕೆಂದು ಪ್ರಾರ್ಥಿಸುವುದುಂ

ಸರಸಿಜಾಕ್ಷಿ ವಿಶಾಖೆ ಗಂಡನ ಮಾತನೇಳಿಸ[3]ಲಾಗದೆಂ
ದುರಗರಾಜಸಮಾನಭೋಗಿಯನಿಂದು ಮಾಣದೆ ಕೊಲ್ವೆನೆಂ
ದಿರದೆ ದೊಡ್ಡಿದುವಪ್ಪ ಲಡ್ಡುಗೆಯಲ್ಲಿ ತೀವ್ರದ ನಂಜನೋ
ಸರಸದಿಕ್ಕಿ ಮಗಳ್ಗೆ ನಿನ್ನ ವರಂಗೆ ನೀನನುರಾಗದಿಂ

ಇಕ್ಕುವುದೆಂದು ಪೇೞ್ದು ನೆರಮನೆಗೆ ಪೋಗಿರ್ಪುದುಂ ಶ್ರೀಮತಿ ಧನಕೀರ್ತಿಯುಂ ಕಾಲಂ ಕರ್ಚಿ ವಿನಯದಿಂದೊಳಗಣ್ಗೆ ಕರೆದು ಪ್ರಿಯದಿಂದೇಱಲಿಕ್ಕಿ[4] ತಳಿಗೆಯಲಿಕ್ಕುವುದುಂ ಆ ಪ್ರಸ್ತಾವದೊಳ್

---

1 ಹಣ್ಣಿಗೆ ಹೊಡೆದರೆ 2 ಒಳಗೊಳಗೆ ಅತ್ತು 3 ತೆಗೆದುಹಾಕಬಾರದು 4 ಮಣೆಹಾಕಿ

ಹಿಂಸಾವಿರಹಿತನ್ಕೆ ನೀ
ನಿಂ ಸಲಿಬಾಳ್ ಪಾಪಕರ್ಮನೆಂ ಪೆಜಿರಟಿವಂ[1]
ಹಿಂಸೆಯನೆ ಬಯಸಿ ಮಱುಗುವ
ನಾ ಸತ್ತಪನೆಂದು ಪೂಣ್ದು[2]ಬರ್ಪನ ತೆಱದಿಂ

ಶ್ರೀವತ್ಸಸೆಟ್ಟಿಯುಂ ಪಸಿದು ಬರ್ಪುದುಂ ಶ್ರೀಮತಿ ಕಾಲಂ ಕರ್ಚಿ ಒಳಗಣ್ಗೆ ಕರೆದು ವಿಷ್ಟರಮನಿಕ್ಕಿ ಪರಿಯಣ[3]ಮುಮನಿಟ್ಟು

ದೊಡ್ಡಿದುವಾಗಿ ನುಣ್ಪೆಸೆದ ಶರ್ಕರೆಯೊಳ್ ಸಮಸಪ್ಪ ಪೆಂಪಿನಾ ಲಡ್ಡುಗೆಯುಂ ಮನೋಮುದದಿನೆನ್ನ ವರಂಗಳಿಂದೆ ಮುನ್ನಮಾಂ ಬಡ್ಡಿಸಿದೆಂದು ನೋಡ ಪದೆದೀಗಳೆ ಡೊಂಬಿತಿ ಜೋಡೆ ಸೋಲದಿಂ ಬಡ್ಡಿಸಿದಪ್ಪಳೆಂದು ನೆಱೆ ದೂಱು ವರೆನ್ನನವಜ್ಞೆಯಿಂ ಪೆಱರ್

ಎಂದು ಕಿಱಿಯುವಪ್ಪ ಲಡ್ಡುಗೆಗಳಂ ಧನಕೀರ್ತಿಗಿಕ್ಕಿ ವಿಷದೊಳ್ ಪುದಿದಿರ್ದ ದೊಡ್ಡಿದುವಪ್ಪ ಲಡ್ಡುಗೆಗಳಂ ತಂದೆಗೆ ಬಡಿಸುವುದಂ ಇರ್ವರುಂ ರುಚಿಕರಮಾದುದೆಂದು ಬಾಯ್ಸವಿಗೆ ಸೋಲ್ತು ಮೆಲ್ವುದುಂ ಶ್ರೀವತ್ಸಂ ವಿಷಮಾವರಿಸಿ

ಪೆಱರಟಿವಂ ಬಯಸುವರೀ
ತೆಱದಿಂ ಮತಿಗೆಟ್ಟು ಸಾವರೆಂದೆಲ್ಲರ್ಗಂ
ನೆಱೆ ಸಾಱಿ ತೋಱಿ ಬೇಗದಿ
ನಱಿಪುವವೋಲ್ ಯಮಪುರಕ್ಕೆ ಸಂದಂ ಕುಟಿಲಂ

(ಅಂತು ಸಾವುದುಂ) ಮನೆಯುವರೆಲ್ಲಂ ಭೋರ್ಗರೆದಟುತುಂ ನೊಂದು ಬೆಂದು ಪಟವಿಸುತಿರ್ದರ್. ಅಂತವರ ಹಾಹಾಕ್ರಂದ ನಮಂ ವಿಶಾಖೆ ಕೇಳ್ದು ಧನಕೀರ್ತಿ ಸತ್ತನೆಂದು ಗಂಡನ ಸಾವ ನಱಿಯದೆ ರಾಗಿಸಿ ಪೆಟ್ಟುವೆರ್ಚಿ ಬಂದು ಒಳಗೆ ಪೊಕ್ಕುಸತ್ತಿರ್ದ ಗಂಡನುಮಂ ಕೆಲದೊಳ್ ಕುಳ್ಳಿರ್ದಳಿಯನುಮಂ ಕಂಡು

1 ನಾಶ 2 ಪ್ರತಿಜ್ಞೆ ಮಾಡಿ 3 ತಟ್ಟೆ

ಆನೊಂದಂ ಬಗೆಯಲ್ ಬಿದಿ1
ತಾನೊಂದಂ ಬಗೆದು ಪಾರ್ಥಿಗರ್ದಿದುದೆನ್ನಂ
ನೀನಱಿವೆಯೆಂದು ಮಾಡಿದೊ
ಡಾನಱಿದೆಂ ಮಗಳೆ ನಿನ್ನ ಪುಣ್ಯಂ ಕಿಱಿದೇಂ

ಎಂದು ಮಗಳ ಮೊಗಮಂ ನೋಡಿ ಪಱಿಯಿಸಿ ಮಾಯೆಯುಂ ಬಿಟ್ಟು ಶ್ರೀದತ್ತಂ ಮಾಡಿದ ಪೊಲ್ಲಮೆಯೆಲ್ಲಮನೊಂದು ಗುಂಹದೆಲ್ಲರ್ಗಮಱಿಪಿ ಪಲರುಂ ಬೇಡವೇಡೆನೆ ವಿಷಪೂರಿತ ಮಪ್ಪಲಡ್ಡುಗೆಗಳಂ ತಿಂದು ವಿಶಾಖೆಯುಂ ಸಾವುದುಂ

ಪುರಜನಮುಂ ಬಾಂಧವರುಂ
ತರಳಾಕ್ಷಿಯ ವಚನದಿಂದಮಱಿದಾತನ ನಿ
ಷ್ಕರುಣತೆಗೆ ನಾಡೆಯುಂ ಕೊ
ಕ್ಕರಿಸಿ ಮನಂ ನೊಂದು ಮಱುಗಿ ಚೋದ್ಯಂಬಟ್ಟರ್

ಓರಿದಪ್ಪಾಪತ್ತಂ ಪರಿ
ಹರಿಸಿ ಮಹಾಪುಣ್ಯಮೂರ್ತಿ ಕೀರ್ತಿನಿಧಾನಂ
ಪರಮಾರ್ಥಂ ಬದುಕಿದನು
ರ್ವರೆಯೊಳಿದಾಶ್ಚರ್ಯಮೆಂದು ಕೈಮುಗಿದು ಜನಂ

ಒಂದೆ ಕೊರಲೊಳ್ ಪೊಗೞುತ್ತುಮಿರೆ ಅದಂ ವಿಶ್ವಂಧರ ಮಹಾರಾಜಂ ಕೇಳ್ದು

ಜಿನಸಮಯವರ್ಧನಂ ಗಡ
ಮನವರತಂ ಭವ್ಯಜನವಿನೋದಂ ಗಡಮಾ
ತನನಿಂದು ನೋೞ್ಪೆಮೆಂದಿಂ
ತನುಪಮಗುಣನಿಳಯನಱ್ಕಱಿಂ ನಲಿಯುತ್ತುಂ

ಧನಕೀರ್ತಿ ಕುಮಾರನರಮನೆಗೆ ಮಹಾವಿಭೂತಿಯಿಂ ಬಂದು ವಾತ್ಸಲ್ಯರತ್ನಾಕರನಂ ನೋಡಿ ಮೆಚ್ಚಿ

1 ವಿಧಿ

ಈ ತೇಜಮುಮಿಾ ರೂಪುಂ
ಪಾತೇನಿಂತಪ್ಪ ವಿನಯಮುಂ ಗುಣಮುಂ ವಿ
ಖ್ಯಾತಿಯುಮೀತನನಿನಿತುಂ
ಭೂತಳಪತಿ ಮಾಟ್ಪು[1]ದೊಂದಚ್ಚರಿಯೇ ?

ಎಂದು ತನ್ನೊಳೆ ನುಡಿದು ವಿಶ್ವಾವತಿಕನ್ನೆಯುಮನರ್ಧರಾಜ್ಯಮುಮಂ ಕುಡಲೆಂದಿರ್ಪುದುಂ ಗುಣಪಾಲಸೆಟ್ಟಿಯಿರ್ದಂ ಕೌಶಾಂಬಿಯೊಳ್ ಎಂದೊರ್ವಂ ಬಿನ್ನವಿಪುದುಂ ಸೆಟ್ಟಿಯುಂ ಬರಿಸಿ ಮುನ್ನಿನ ಪನವಿಯುಂ ಕೊಟ್ಟು ಧನಕೀರ್ತಿಗೆನ್ನ ಮಗಳಂ ಪ್ರಾಣವಲ್ಲಭೆ ಮಾಡೆಂದು ಸೆಟ್ಟಿಯು ಮನದ ಸಂಶಯಂ ಪಿಂಗೆ ನುಡಿದೊಡಂಬಡಿಸಿ ಶುಭದಿನಮಂ ಬೆಸಗೊಂಡು

ಧನಕೀರ್ತಿ ಕುಮಾರಂಗಂ
ತನೂಜೆಗಂ ಮನದೊಳೊಸೆದು ಪರಮೋತ್ಸವದಿಂ
ಜಿನಗಂಧೋದಕದಿಂದಂ
ಜನಾಧಿಪಂ ತಾನೆ ಬಂದು ಕೈನೀರೆಱೆದಂ[2]

ಅಂತು ಕೈನೀರೆಱೆದು ಕ್ಷೀರೋದಕನ್ಯಾಯದಿಂದೊಡಗೂಡಿರ್ಪನ್ನೆಗಂ ಯಶೋಧರರೆಂಬೇಕವಿಹಾರಿಗಳ್ ಉಜ್ಜಯಿನಿಗೆ ವಂದಿರ್ಪುದುಂ ಆಱಸುವ ಬಳ್ಳಿ ಕಾಲೊಳ್ ತೊಡರ್ದುದೆಂಬಂತೆ ಸುವ್ರತಾರೂಢರಾಗಲೆಂದಿರ್ದೆಮಗೆ ಮಹಾಪುರುಷರ್ ಭಾಗ್ಯದಿಂದಿದಿರ್ವಂದರೆಂದು ವಿಶ್ವಂಧರಮಹಾರಾಜಂ ಯೋಗೀಂದ್ರವಂದ್ಯಪಾದನನರ್ಚಿಸಿ ಬಂದಿಸಿ ಆಪ್ತಾಗಮ ಪದಾರ್ಥಂಗಳಂ ಕೇಳ್ದಿರ್ಪುದುಂ ಗುಣಪಾಲಸೆಟ್ಟಿ ಧನಕೀರ್ತಿಗೆ ಶ್ರೀದತ್ತಸೆಟ್ಟಿ ಮಾಡಿದ್ದುದುಂ ಕಂಟಕಂಗಳುಂ ತಪ್ಪಿ ರಾಜ್ಯಮಾದುದಾವಭವದ ಪುಣ್ಯದ ಫಲಮೆಂದು ಬೆಸಗೊಳ್ವುದುಂ ದುರಿತೇಂಧನ ದಹನನಱಿದು ಪೇಳ್ದಂ

1 ಮಾಡುವುದು 2 ಧಾರೆ ಎರೆದನು

ಮುನಿಪತಿ ಪೇೞೆ ಕೇಳ್ದು ಗುಣಪಾಲವಣಿಗ್ವರನುಂ ಮಹೀಶನುಂ
ವನರುಹನೇತ್ರೆಯುಂ ಸಕಲ ಭೂಭುಜರುಂ ಧನಕೀರ್ತಿ ಭೂಮಿಪಾ
ಲನುಂ ಮೃಗಸೇನೆಯುಂ ಮನದೊಳಚ್ಚರಿವಟ್ಟು ಜಿನೇಂದ್ರಧರ್ಮಮುಂ
ಜನನುತಮಂ ಕರಂ ಪಡೆದು ನಂಬಿದರ್ಮಗಿಡರುಂಟೆ ಲೋಕದೊಳ್

ಎಂದು ತನ್ನೊಳ್ ನುಡಿದು ದಂಟನೂದುವಂಗೆ ಕೊಳಲ್ ದೊರೆಕೊಂಡುದೆಂಬಂತೆ ಕೋಣನನೇಱುವಂಗೆ ಮದಕರಿ ದೊರೆಕೊಂಡಂತೆ ಪುಲ್ಗುಡಿಸಲೊಳಿರ್ದಂಗೆ ಮಣಿಮಾಡ[1]ಮಾದಂತೆ ಮುನ್ನಮೆ ಬ್ರತಮಂ[2] ಕೊಳಲೆಂದಿರ್ದವರಹಿಂಸಾವ್ರತದ ಪ್ರತ್ಯಕ್ಷ ಫಲಮುಂ ಕಂಡು ವಿಶ್ವಂಧರಮಹಾರಾಜನುಂ ಗುಣಪಾಲ ಸೆಟ್ಟಿಯುಂ ಧನಶ್ರೀಯುಂ ಜಿನದೀಕ್ಷೆಗೊಂಡರ್. ಧನಕೀರ್ತಿ ಕುಮಾರನುಂ ಪಲಕಾಲಂ ರಾಜ್ಯಂಗೆಯ್ವುತ್ತುಮಿರ್ದು ಕೆನ್ನೆಯುಂ ನರೆಯುಂ ಕಂಡು ಸಂಸಾರಕ್ಕೆ ಪೇಸಿ ಸಂನ್ಯಸನ ವಿಧಿಯಿಂ ಮುಡಿಪಿ ಅಹಮಿಂದ್ರನಾಗಿ ಪುಟ್ಟಿದಂ. ಶ್ರೀಮತಿಯುಂ ವಿನಯಮತಿಯುರೆಂಬ ಕಂತಿಯರಲ್ಲಿ ದೀಕ್ಷೆಯುಂ ಕೊಂಡು ಮುಡಿಪಿ ದೇವಲೋಕದೊಳ್ ಪುಟ್ಟಿದಳ್. ವಿಶ್ವಂಧರ ಮುನಿಕುಂಜರನುಂ, ಗುಣಪಾಲಮುನಿಯುಂ ಧನಶ್ರೀಯುಂ ಮುಡಿಪಿ ದೇವಲೋಕದೊಳ್ ಪುಟ್ಟಿದರದುಕಾರಣದಿಂ

ಕೊಲೆಯುಂ ಬಿಟ್ಟ ಮಹಾತ್ಮಂ
ಸುಲಲಿತ ಕೈವಲ್ಯ ಕಾಮಿನೀಶ್ವರನಕ್ಕುಂ
ಪಲವುಂ ಮಾತಿನೊಳೇನೊ
ಳ್ಗಲಿಯಾಗಿ ಸಮಸ್ತ ಧಾತ್ರಿಯುಂ ತಾನಾಳ್ಗುಂ

ಈ ಕಥೆಯನ್ನು ಓದಿದ ಮೇಲೆ ನಮ್ಮ ಜನರಲ್ಲಿ ಹೆಚ್ಚು ಬಳಕೆಯಲ್ಲಿರುವ ಚಂದ್ರಹಾಸನ ಕಥೆಯು ಜ್ಞಾಪಕಕ್ಕೆ ಬಾರದೆ

---

1 ಅರಮನೆ 2 ವ್ರತ

ಇರುವುದಿಲ್ಲ. ಪ್ರಾಚೀನ ಜನಾಂಗಗಳಲ್ಲಿ ಈ ಕಥೆಯು ಬಹಳ ಪ್ರಚಾರದಲ್ಲಿದ್ದಂತೆ ಕಂಡು ಬರುತ್ತದೆ. ತನ್ನ ಕೊಲೆಗಾಗಿ ಒಂದು ಪತ್ರವನ್ನು ತರುತ್ತಿರುವ ರಾಜಕುಮಾರನು ಆಯಾಸ ದಿಂದ ಮಲಗಿದ್ದಾಗ ರಾಜಕುಮಾರಿಯೊಬ್ಬಳು ಬಂದು ಆ ಪತ್ರವನ್ನು ಬದಲಾಯಿಸಿ ಆತನನ್ನು ಮದುವೆಯಾಗುವ ಈ ಸನ್ನಿವೇಶವು ಪ್ರಪಂಚದ ಅನೇಕ ಜನಾಂಗಗಳ ಕಥೆಗಳಲ್ಲಿ ಕಂಡು ಬರುತ್ತದೆ. ಇದು ಬಹಳ ಪುರಾತನವಾದ ಕಥಾವಸ್ತು. ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ರೂಪಗಳನ್ನು ಪಡೆದಿದೆ ಅಷ್ಟೆ. ಗ್ರೀಕ್ ಮತ್ತು ರೋಮನ್ ಜನರ ಕಥಾಕೋಶದಲ್ಲಿ ಇದಕ್ಕೆ ಸಾಮ್ಯಗಳು ಕಂಡುಬರುತ್ತವೆ.[1] ಇಷ್ಟು ವಿಶಾಲ ವ್ಯಾಪ್ತಿಯುಳ್ಳ ಕಥೆ ಜೈನರ ಮನಸ್ಸನ್ನು ಸೆಳೆದುದರಲ್ಲಿ ಆಶ್ಚರ್ಯವೇನೂ ಇಲ್ಲ. ನಯಸೇನನು ಈ ಕಥೆಯಲ್ಲಿ ವ್ಯತ್ಯಾಸ ಮಾಡಿಕೊಂಡರೂ ಅದರ ತಿರುಳನ್ನು ಉಳಿಸಿಕೊಂಡಿದ್ದಾನೆ. ಶ್ರೀದತ್ತನ ಪಾತ್ರರಚನೆ ಯನ್ನು ಚೆನ್ನಾಗಿ ಮಾಡಿದ್ದಾನೆ. ಮಗು ಹುಟ್ಟಿದೊಡನೆಯೇ ಹುಟ್ಟಿದ ಅವ್ಯಾಜದ್ವೇಷ ಕ್ರಮೇಣ ಬೆಳೆದು ಮಗಳ ಸೌಮಂಗಲ್ಯ ವನ್ನೂ ಅವನು ಹೇಗೆ ನಿರ್ಲಕ್ಷಿಸಿದನು ಎನ್ನುವುದು ಮನದಟ್ಟು ವಂತೆ ಚಿತ್ರಿತವಾಗಿದೆ. ಕೊನೆಗೆ ತನ್ನ ತಪ್ಪಿನಿಂದ ತಾನೇ ಸತ್ತನು. ಇಂತಹ ತಪ್ಪುಮಾಡುವವರೆಲ್ಲರೂ ಹೀಗೆಯೇ ಸಾಯುತ್ತಾರೆನ್ನುವುದನ್ನು ತೋರಿಸುವಂತೆ ಸತ್ತನಂತೆ!

ಆದರೆ ಈ ಕಥೆಯ ಮೇಲೆ ಒಂದು ಆಕ್ಷೇಪಣೆಯನ್ನು ಎತ್ತ ಬಹುದು. ಶ್ರೀದತ್ತನು ಚಂದ್ರಹಾಸನ ಕಥೆಯ ದುಷ್ಟಬುದ್ಧಿಗೆ ಯಾವ ವಿಧದಲ್ಲಿಯೂ ಸಮನಾಗಲಾರನು; ಈ ಕಥೆಯಲ್ಲಿ

---

1 ಸಂಭಾವನೆ. ಚಂದ್ರಹಾಸನ ಕಥೆಯ ಪ್ರಸಾರ, ಕೆ. ವೆಂಕಟರಾಮಪ್ಪ, ಎಂ.ಎ. ಅವರ ಲೇಖನವನ್ನು ನೋಡಿ.

ಮಗುವಿನ ಮೇಲೆ ದ್ವೇಷ ಬೆಳೆಯುವುದಕ್ಕೆ ತಕ್ಕಷ್ಟು ಕಾರಣವೇ ಇಲ್ಲ ಎಂಬುದು ಆ ಆಕ್ಷೇಪಣೆ. ಕಥೆಯಲ್ಲಿ ದ್ವೇಷಕ್ಕೆ ಕಾರಣ ಸಾಲದೆನ್ನುವುದನ್ನು ಕಂಡು ಆಮೇಲೆ ಬರೆದ ಚಂದ್ರಹಾಸನ ಕಥೆಯಲ್ಲಿ ಕವಿಗಳು ದುಷ್ಟಬುದ್ಧಿಗೆ ರಾಜ್ಯದಾಸೆಯನ್ನು ಅಂಟಿಸಿದರು. ಆದರೆ ಈ ಕಥೆಯಲ್ಲಿಯೂ ದ್ವೇಷವು ಸಂಪೂರ್ಣವಾಗಿ ಅವ್ಯಾಜವೇ ಅಲ್ಲ. ಶ್ರೀದತ್ತನ ಈ ವೈರಕ್ಕೆ ಹಿಂದಿನ ಜನ್ಮಾಂತರಗಳಲ್ಲಿ ಬೆಳೆದಿರಬಹುದಾದ ವೈಷಮ್ಯ ಕಾರಣ. ಆ ದೃಷ್ಟಿಯಿಂದ ನೋಡಿದರೆ ಶ್ರೀದತ್ತನ ಕಾರ್ಯಕ್ಕೆ ಸಮಾಧಾನ ಹೇಳುವುದು ಕಷ್ಟವಾಗುವುದಿಲ್ಲ.

ನಯಸೇನನ ಕಥನಕ್ರಮ ಈ ಕಥೆಯಲ್ಲಿ ಸೊಗಸಾಗಿ ವ್ಯಕ್ತವಾಗುತ್ತದೆ. ಅವನ ಸುಲಭಪದಪ್ರಯೋಗ, ಕಥೆಯಲ್ಲಿನ ಸನ್ನಿವೇಶಗಳ ವೇಗವಾದ ಪ್ರವಾಹ, ಪಾತ್ರರಚನಾಕೌಶಲ ಇವೆಲ್ಲವೂ ಇಲ್ಲಿ ಸಮ್ಮಿಳಿತವಾಗಿವೆ. ನಯಸೇನನ ಕಾವ್ಯಕೌಶಲಕ್ಕೆ ಈ ಕಥೆಯನ್ನು ಎತ್ತಿ ತೋರಿಸಬಹುದು.

## ೬. ಕೆಲವು ನೀತಿಕಥೆಗಳು

ಸತ್ಯವ್ರತದ ಕಥೆಯನ್ನು ಹೇಳುವಾಗ ನಯಸೇನನು ಒಂದು ಹೊಸ ರೀತಿಯನ್ನು ಅನುಸರಿಸಿದ್ದಾನೆ. ಆ ಕಥೆಯಲ್ಲಿ ಒಬ್ಬ ಸೆಟ್ಟಿ ಜೈನಸಂನ್ಯಾಸಿಯೊಬ್ಬನನ್ನು ತನ್ನ ಮನೆಗೆ ಕರೆದು ಕೆಲವು ದಿನಗಳವರೆಗೆ ಶುಶ್ರೂಷೆ ಮಾಡುತ್ತಾನೆ. ಸಂನ್ಯಾಸಿಯನ್ನು ಕಳುಹಿಸುವ ದಿನ ಸೆಟ್ಟಿಯ ಮಗನು ತಂದೆಯ ಪೆಟ್ಟಿಗೆಯಿಂದ ಸ್ವಲ್ಪ ಚಿನ್ನವನ್ನು ಕದ್ದು ಮುಚ್ಚಿಟ್ಟಿರುತ್ತಾನೆ. ಸೆಟ್ಟಿಯು ಸಂನ್ಯಾಸಿಯೇ ಕದ್ದಿದ್ದಾನೆಂದು ಅವನ ಮೇಲಿನ ಸಂಶಯದಿಂದ ಅವನನ್ನು ಪುನಃ ಮನೆಗೆ ಕರೆದು ಒಂದು ಕಥೆಯನ್ನು ಹೇಳುತ್ತಾನೆ. ಸಂನ್ಯಾಸಿಗೆ ಈ ವಿಷಯವು ಗೊತ್ತಾಗುತ್ತದೆ. ತಾನು ಕಳ್ಳನಲ್ಲವೆಂಬುದನ್ನು ತೋರಿಸುವುದಕ್ಕೆ ಅವನು ಮತ್ತೊಂದು ಕಥೆ ಹೇಳುತ್ತಾನೆ. ಕೊನೆಗೆ ಸೆಟ್ಟಿಯ ಮಗನಿಗೆ ವೈರಾಗ್ಯ ಹುಟ್ಟಿ ಚಿನ್ನವನ್ನು ತಂದೆಯೆದುರಿಗೆ ಎಸೆದು ತಾನು ಜೈನದೀಕ್ಷೆಯನ್ನು ವಹಿಸುತ್ತಾನೆ. ಈ ಕಥೆಯಲ್ಲಿ ಸೆಟ್ಟಿಯೂ ಸಂನ್ಯಾಸಿಯೂ ತಾವು ಏನು ಹೇಳುತ್ತಿರುವರೆಂಬುದು ಇಬ್ಬರಿಗೂ ಗೊತ್ತಿದ್ದರೂ ಅದನ್ನು ಬಾಯಿಬಿಟ್ಟು ಹೇಳದೆ ಕಥೆಗಳ ಮೂಲಕ ಹೇಳುವುದರಲ್ಲಿ ಒಂದು ಸೊಗಸಿದೆ. ಕಥೆಯ ಸ್ವಾರಸ್ಯ ಕೊನೆಯತನಕ ಉಳಿಯುತ್ತದೆ

ಈ ಮುಖ್ಯ ಕಥೆಯ ಒಳಗೆ ಸೇರಿರುವ ಅನೇಕ ಸಣ್ಣ ಸಣ್ಣ ಕಥೆಗಳಲ್ಲಿಯೂ ಒಂದು ಬಗೆಯ ಸ್ವಾರಸ್ಯವಿದೆ. ಉದಾಹರಣೆಗಾಗಿ ಎರಡು ಕಥೆಗಳನ್ನು ಮುಂದೆ ಕೊಟ್ಟಿದೆ.

**ಸೆಟ್ಟಿ ಹೇಳಿದ ಒಂದು ಕಥೆ:—**

ಭಾರತಿಯೆಂಬೊಂದು ನದೀ
ತೀರದೊಳೊರ್ವಂ ಕಾಪಾಲಿಯೆಂಬಂ ಗೊರವಂ
ಧೀರಂ ತಾಪಸ ತಪಸಿನೊ
ಳಾರಿಂದಂ ಕರಮೆ ಪಿರಿಯನೆಂದೊಸೆದಿರ್ದಂ

ಅಂತಿರ್ಪುದುಮೊಂದು ದಿನಂ ಸಂತತಂ ಮೞೆಕಱೆವುದುಂ ಗಿರಿಯ ಕಾಂತಾರದ[1] ಪೆರ್ವೊನಲೆಲ್ಲಂ ಒಂದಾಗಿ ವಾರಾಶಿ[2] ಮೇರೆದಪ್ಪಿದುದೆಂಬಂದದೊಳೆ ಪೊಲನುಂ ನೆಲನುಂ ಜಲಪ್ರಳಯ ಮಾಗೆ ಬಂದ ತೊಱೆಯೊಳೊಂದಾನೆಯೆ ಮೞ ಬಿರ್ದು ಮತ್ತಿಯ ಪೆರ್ಮರನಂ ಪಿಡಿದು ಮರನುಂ ತಾನುಂ ಬರುತ್ತಿರ್ಪುದಂ ಕಾಪಾಲಿ ಭಿಕ್ಷುಕಂ ಕಂಡು, ತೊಱೆಯುಂ ಪಾಯ್ದು ಮಾತಂಗಕಳಭಮಂ[3] ಪಿಡಿದು ಮರಂ ಬೆರಸು ತಡಿಗೆ ತಂದು ಮರನಂ ಪೋಗೆಬಿಟ್ಟು ತತ್ಕರಿಯುಂ ಪೊಱಗಣ್ಗೆ ನೋಯಲೀಯದೆ ತೆಗೆದು ತದ್ಗಜದ ಭಯಮುಂ ಪಿಂಗಿಸಿ ತನ್ನ ಮಠಕ್ಕೆ ತಂದು

ಪುಳಿಗೂಟಂ ತದಿಕಿನ[4] ಕೆಂ
ದಳಿರಂ ಪಾಲ್ಗೆನೆಯನೆಳೆಯ ಪುಲ್ಲಂ ಕಬ್ಬಂ
ಬಲವಂತನಕ್ಕುಮೆಂದು
ಜ್ವಲಚಿತ್ತಂ ತಂದು ಪೊರೆವುದುಂ ಗಜಶಿಶುವಂ

ಕರಿಪತಿ ಬೆಳೆದು ಸುರೇಶನ
ಕರಿಗಂ ಮಿಗಿಲೆನಿಸಿ ಮಠದೊಳಿರೆ ಪಿಸುಣರ್[5]ತ
ತ್ಕರಿಯಿರ್ದುದನೊಯ್ಯನೆ ತ
ಮ್ಮರಸಂಗಱಿಪುವುದುಮರಸನಱಿದಾ ಕರಿಯುಂ

---

1 ಕಾಡು 2 ಸಮುದ್ರ 3 ಆನೆಯ ಮರಿಯನ್ನು 4 ಆನೆಬೇಲ
5 ಚಾಡಿಕೋರರು

ಬೇಡಿ ಕಾಪಾಲಿಯಲ್ಲಿಗಟ್ಟುವುದುಂ ಕಾಪಾಲಿ ರಾಜಭೃತ್ಯರ ದೆಸೆಯಿಂದೆ ತತ್ಪ್ರಪಂಚಮೆಲ್ಲಮುಮನರಿದು ಆನೆಯುಮನೊಪ್ಪಿಸು ವುದುಂ,

ಅರಮನೆಯೊಳಗಿರಲಾಱದೆ
ಕರಿ ಪಿಡಿಮಿಡಿಗೊಂಡು ನೆನೆದು ಮುನ್ನಿನ ಸೆಱೆಯುಂ
ಪರಿಹರಿಸಿ ಕಾಪಿನವರಂ
ಪರಿತಂದುದು ಮುಱಕೆ ಮನದ ಮೋಪದಿನಾಗಳ್

ಧರಣೀನಾಥಂ ತನಗಾ ಗಜದ ಮೇಲೆ ಮೋಹಮುಂಟಪ್ಪು ದಱಿಂ ಮಗುಳೆ ತರಿಸಿ ಮುನ್ನಿನೆಡೆಯೊಳ್ ಕಟ್ಟಿಸುವುದುಂ ಮತ್ತಂ ನಿಲಲಾಱದೆ ಮುಱಮೆ ಗುಱಿಯಾಗಿ ಪೋಪುದುಂ, ಮಹೀನಾಥಂ ಪಲವುಂ ಸೂಳ್ತು[1]ಱಿಸಿ ಬೇಸತ್ತು ಕಾಪಾಲಿಗೆ ತಾನೆನ್ನ ದೇಶದಿಂ ಪೊಱಮಟ್ಟು ಪೋಪುದೆಂದಟ್ಟುವುದುಂ ಕಾಪಾಲಿ ಭಯಸ್ಥನಾಗಿ ಆನೆಯುಮನರಮನೆಗೆ ತಂದೊಪ್ಪಿಸಿ ಪುದುಂ, ಅರಸಂ ನಾಲ್ಕಡಿ ಪೊಗವೇಱಿದೊಡೆ ಭಯಂಗೊಂಡೆನ್ನ ನರಸಂಗೊಪ್ಪಿಸಿ ಪೋದಂ ಕೊಲ್ಲದೆ ಮಾಣೆನೆಂದು

ಧರೆಯುಂ ಮೆಚ್ಚೆ ಪಲಂಬರುಂ ದಯೆಯುಮನೊಕ್ಕಾನಂದದಿಂದೀಕ್ಷಿಸು
ತ್ತಿರೆ ಕಾಪಾಲಿಮಹೀಸುತಂ ಕರುಣದಿಂ ಪೊಕ್ಕೆನ್ನನಂದೆಯ್ದೆ ವಿ
ಸ್ತರದಿಂ ರಕ್ಷಿಸಿ ಕಾದನೆನ್ನದೆ ಗಜೇಂದ್ರಂ ಕೋಪದಿಂ ಬಂದು ನ
ಟ್ಟಿರುಳೊಳ್ ಕೊಂದುದು ಬೌದ್ಧನಂ ಧರಣಿಯೊಳ್
ನಿರ್ಧರ್ಮರೇಗೆಯ್ಯರೋ ?

ಮುನಿ ಹೇಳಿದ ಒಂದು ಕಥೆ :—

ದಂತಿಪುರಮೆಂಬ ಪೊೞಲೊಳ್
ಕಂತುವಿನರಲಂಬೆ[2] ಪೆಣ್ಣರೂಪಾಯ್ತೆನ್ನಿಂ

1 ಅನೇಕಸಲ 2 ಮನ್ಮಥನ ಹೂಬಾಣ

ಬಂತೆಸೆವ ಚೆಲ್ವೆಯೊರ್ವಳ
ನಂತಶ್ರೀಯೆಂಬ ಸೂಳೆ ಸುಖದಿಂದಿರ್ಪಳ್

ಆಕೆಯು ಕೆಳದಿ ವಾಸವದತ್ತೆಯೆಂಬಳ್ ಅನಂತಶ್ರೀಗೊಂದು ಗಿಳಿಯಂ ಮಾಱುಗೊಂಡು ಕೂರ್ಪೆಯಿಂ ತಂದು ಕುಡುವುದಂ ಗಿಳಿಯ ಚೆಲ್ವಿಂಗೆ ನಾಡೆಯುಂ ಮನದೊಳ್ ಸೋಲ್ತು ಪೊನ್ನ ಪಂಜರದೊಳ್ ಗಿಳಿಯನಿರಿಸಿ ನಾನಾಪ್ರಕಾರದ ಸೂಳೆಮಾತುಗಳಂ ಶೃಂಗಾರವೃತ್ತಂಗಳುಮಂ ಕಲಿಸುತ್ತಂ ವಿನೋದವಾಗಿ ಪಲವು ದಿವಸಂ ಪೋಗೆ ಅವಳ ಸೌಭಾಗ್ಯದ ಪೆಂಪೆಂಬ ಪೆಸರೊಳಡಕೆಯು ಭಾಗದ ಭಾಗವಿಲ್ಲೆಂದು

ಪುರದೊಳಗಣಸೂಳೆಯರೆ
ಲ್ಲರುಮಾಕೆಗೆ ಕೊಲ್ವ ಬಗೆಯುಂ ತಂದಾ
ದರದಿಂ ವಾಸವದತ್ತೆಯು
ನೆರಡಿಲ್ಲದೆ ತಮಗೆ ಮಾಡಿಕೊಂಡನುನಯದಿಂ

ಮೆಲ್ಲನೆ ವಾಸವದತ್ತೆಗೆ
ಕೊಲ್ಲಾಕೆಯನೆಂದು ಕೊಟ್ಟು ಪಲವುಂ ಪೊನ್ನಂ
ಕಳ್ಳೊಳಗೆ[1] ಕಾಳಕೂಟಮ
ನೆಲ್ಲರುಮೊಂದಾಗಿ ಕೂಡಿ ಕುಡುವುದುಮಾಗಳ್

ವಾಸವದತ್ತೆ ಪೊನ್ನ ಮೋಹದಿಂ ಕಳ್ಳಂ ಕೊಂಡುಬಂದು ಅನಂತಶ್ರೀಗೆ ಕುಡುವುದುಂ

ಇಲ್ಲಿರಿಸಿ ಪೋಗು ಕಳ್ಳಂ
ಮೆಲ್ಲನೆ ಬಯ್ಗಿಂಗೆ ಕುಡಿವಮಿರ್ವರು ನೀನುಂ
ತಿಲ್ಲಿಗೆ ಬಾ ಯೆಂದಾಕೆಗೆ
ಸಲ್ಲಲಿತಾಂಗಿ ಮೆಚ್ಚಿಗೊಟ್ಟಾದರದಿಂ

1 ವಿಷದಲ್ಲಿ

ಮುನ್ನಿಸುವುದುಮಾಕೆಯುಂ ಕಳ್ಳಂ ಮಂಚದ ಕೆಳಗಿರಿಸಿ ತನ್ನ ಮನೆಗೆ ಪೋದಳ್. ಇತ್ತಲನಂತಶ್ರೀಯುಂ ಪಾಸಿನ ಮೇಲೆ ಪಟ್ಟಿರ್ದಳ್. ಅನ್ನೆಗಂ ಪಂಜರದೊಳಿರ್ದ ಗಿಳಿ ಕಳ್ಳ ಗಂಧಕ್ಕೆ ಮೊಗಸಿದ ನೊಣಂಗಳೆಲ್ಲಂ ಸಾವುದಂ ಕಂಡು ವಿಷಮೆಂದಱಿದು ಈ ಕಳ್ಳಂ ಕುಡಿದಳಪ್ಪೊಡೆ ಅನಂತಶ್ರೀ ಸಾಗುಮೆಂದು ಬಟ್ಟಲಂ ನೆಲಕ್ಕುಗುವದುಂ,[1] ಅನಂತಶ್ರೀ ಮುಳಿದು ಆ ಗಿಳಿಯಂ ಕೊಂದು, ಕಳ್ಗೆಱಗಿ ಸಾವ ಮಾಕ್ಷಿಕತತಿಯಂ[2] ಕಂಡು, ಈ ಗಿಳಿಯಿಂದೊರ್ವೆಗೆ ಬರ್ದುಕಿದೆನ್, ಎನಗುಪಕಾರಂಮಾಡಿದ ಗಿಳಿಯಂ ವಿಚಾರಿಸದೆ ಕೊಂದೆನ್ ಎಂದು ಗಿಳಿಯುಪೆಣನಂ ತನ್ನೆರ್ದೆಯ ಮೇಲಿಕ್ಕಿ ಕೊಂಡಲ್ತಳ್.

ಸತ್ಯವ್ರತದ ಕಥೆಯಲ್ಲಿ ಇಂತಹ ಪ್ರಾಣಿಗಳ ಮತ್ತು ಪಕ್ಷಿಗಳ ಕಥೆಗಳು ಅನೇಕವಿವೆ. ಇವುಗಳನ್ನು ಸಾಮಾನ್ಯವಾಗಿ ಇಂಗ್ಲಿಷಿನಲ್ಲಿ 'ಫೇಬಲ್' ಎಂದು ಕರೆಯುತ್ತಾರೆ. ನಾವು ಇವುಗಳನ್ನು ಚಿಕ್ಕ ನೀತಿಕಥೆಗಳು ಎಂದು ಹೇಳಬಹುದು. ಇಂತಹ ಕಥೆಗಳು ನಮ್ಮಲ್ಲಿ ಬಹಳ ಪ್ರಾಚೀನ ಕಾಲದಿಂದಲೂ ಇವೆ. ಪಂಚತಂತ್ರ ಹಿತೋಪದೇಶಗಳಲ್ಲಿ ಅನೇಕ ನೀತಿಕಥೆಗಳಿವೆ. ಗ್ರೀಸ್ ದೇಶದಲ್ಲಿ ಸುಮಾರು ಕ್ರಿ.ಪೂ. ೫ನೆಯ ಶತಮಾನದಲ್ಲಿ ಈಸೋಫ್ ಎಂಬುವನು ಅನೇಕ ನೀತಿಕಥೆಗಳನ್ನು ಬರೆದನು. ಎಲ್ಲ ದೇಶಗಳಲ್ಲಿಯೂ ಅವರವರ ನೀತಿಕಥೆಗಳು ಬೆಳೆದಿವೆ. ಆದರೆ ಪ್ರಾಚೀನತೆಯಲ್ಲಿ ಗ್ರೀಸ್ ಮತ್ತು ಇಂಡಿಯಾ ದೇಶಗಳು ಮೊದಲನೆಯ ಸ್ಥಾನವನ್ನು ಆಕ್ರಮಿಸುತ್ತವೆ.

---

1 ಚೆಲ್ಲು 2 ನೊಣದ ಗುಂಪು

ಈ ಕಥೆಗಳನ್ನು ಮುಖ್ಯ ಕಥೆಯೊಂದಿಗೆ ಹೊಂದಿಸಿ ಹೇಳಿರುವುದರಲ್ಲಿ ನಯಸೇನನ ಆಶಯ ಸುಲಭ ವೇದ್ಯವಾಗಿದೆ. ಸತ್ಯವ್ರತದ ಮಹಿಮೆಯನ್ನು ಸಾರುವುದರ ಜೊತೆಗೆ ಕೆಲವು ನೀತಿಗಳನ್ನು ತಿಳಿಸುವುದಕ್ಕೆ ಪ್ರಯತ್ನಪಟ್ಟಿದ್ದಾನೆ. ಈ ಕಥೆಯನ್ನು ಹೇಳಿರುವ ರೀತಿಯಲ್ಲಿ ಒಂದು ನೂತನತೆ ಇದೆ.

## ೭. ಧರ್ಮಾಮೃತದಲ್ಲಿ ಪರಮತ ವಿಡಂಬನ

ಒಬ್ಬ ವ್ಯಕ್ತಿಯಲ್ಲೋ ಸಮಾಜದಲ್ಲೋ ಕಾಣಬರುವ ಕುಂದನ್ನು ಎತ್ತಿ ತೋರಿಸಿ ಹಾಸ್ಯ ಮಾಡುವುದೇ ವಿಡಂಬನ. ಜೈನಧರ್ಮವನ್ನು ಪ್ರಚಾರ ಮಾಡಲು ಹೊರಟ ನಯಸೇನನಿಗೆ ಇತರ ಮತಗಳನ್ನು ವಿಡಂಬನ ಮಾಡುವುದು ಆವಶ್ಯಕ ವಾಯಿತು. ಧರ್ಮಾಮೃತದ ಕಥೆಗಳನ್ನು ಪರಿಶೀಲಿಸಿದರೆ ಅವುಗಳಲ್ಲೆಲ್ಲಾ ಒಬ್ಬ ಬ್ರಾಹ್ಮಣನೋ, ಬೌದ್ಧನೋ ಜೈನ ಮುನಿಗಳ ಧರ್ಮೋಪದೇಶವನ್ನು ಕೇಳಿ ತಮ್ಮ ಮತಗಳಿಗಿಂತ ಜೈನಧರ್ಮವೇ ಶ್ರೇಷ್ಠವಾದುದೆಂದು ನಂಬಿ ಆ ಮತಕ್ಕೆ ಸೇರುವುದು ವ್ಯಕ್ತವಾಗುತ್ತದೆ. ಇದರಿಂದ ಎರಡು ವಿಷಯಗಳು ಸಾಧಿತವಾದ ಹಾಗಾಗುತ್ತದೆ. ಪರಮತಖಂಡನೆಯೂ ಸ್ವಮತ ಪ್ರಸಾರಣವೂ ಒಟ್ಟಿಗೆ ನಡೆದಂತಾಗುತ್ತದೆ. ಇಂತಹ ಸನ್ನಿವೇಶ ಗಳು ಧರ್ಮಾಮೃತದಲ್ಲಿ ಅನೇಕವಿವೆ.

ಇತರ ಮತಗಳನ್ನು ಖಂಡಿಸುವುದೂ ಹಾಸ್ಯ ಮಾಡುವುದೂ ಒಂದು ಪಕ್ಷದಿಂದ ಮಾತ್ರ ನಡೆಯುವುದು ಅಸಾಧ್ಯ. ಎರಡು ಕೈಸೇರಿದರೆ ತಾನೇ ಚಪ್ಪಾಳೆ! ವೈದಿಕಮತದವರೂ ಬೌದ್ಧರೂ ಜೈನರನ್ನು ಹಾಸ್ಯ ಮಾಡುತ್ತಿದ್ದರೆಂದು ಕಾಣುತ್ತದೆ. ಅದಕ್ಕೆ ಪ್ರತ್ಯುತ್ತರವಾಗಿ ಜೈನರು ಅವರನ್ನು ಕುಚೋದ್ಯ ಮಾಡು ತ್ತಿದ್ದರು. ಈಗ ತ್ರಿಮತಸ್ಥ ಬ್ರಾಹ್ಮಣರಲ್ಲಿ ಒಬ್ಬರಮೇಲೊಬ್ಬರು ಕಥೆಗಳನ್ನು ಕಟ್ಟಿ ಅಪಹಾಸ್ಯ ಮಾಡುವುದನ್ನು ಕೇಳಿ ನೋಡಿರು ವವರಿಗೆ ಇದು ವಿಚಿತ್ರವಾಗಿ ತೋರಲಾರದು. ಆದರೆ ನಯಸೇನನ ಗ್ರಂಥವನ್ನು ಓದುವವರಿಗೆ ಒಂದು ದೊಡ್ಡ ಸಮಾಧಾನ ವೇನೆಂದರೆ ಈ ಅಪಹಾಸ್ಯಕ್ಕೆ ಆತನು ಒಂದು ಮಿತಿಯನ್ನು

ಒಡ್ಡಿದ್ದಾನೆಂಬುದು. ಸುಮಾರು ನಯಸೇನನ ಕಾಲದಲ್ಲಿಯೇ ಇದ್ದ ಇತರ ಕೆಲವು ಕವಿಗಳು ಮರ್ಯಾದೆಯ ಮೇರೆಯನ್ನು ಮೀರಿರುವುದು ಕಾಣಬರುತ್ತದೆ. ಬ್ರಹ್ಮಶಿವ (೧೧೨೫) ವೃತ್ತವಿಲಾಸ (೧೧೬೦) ಎಂಬ ಕವಿಗಳು ಇದನ್ನೇ ತಮ್ಮ ಕಾವ್ಯವಸ್ತುವನ್ನಾಗಿ ಆರಿಸಿಕೊಂಡಿದ್ದಾರೆ. ವೃತ್ತವಿಲಾಸನು ತನ್ನ ಶಾಸ್ತ್ರಸಾರ[1]ವೆಂಬ ಗ್ರಂಥದಲ್ಲಿ ವೈದಿಕದೇವತೆಗಳ ವರಪ್ರದಾನ ಶಕ್ತಿಯನ್ನು ಗೇಲಿ ಮಾಡಿದ್ದಾನೆ.

"ಆ ದೈವಂ ವರವನೀವಂದಂ ಎಂತುಟೆಂದೊಡೆ, ಬಂಜೆಯ ಪೆರ್ಮಗಂ ಮೃಗತೃಷ್ಣಾಂಬುವಂ ಮಿಂದು, ಕಲ್ಲನಾರ ಸೀರೆಯು ನುಟ್ಟು, ಆಗಸವೂದುಜುಂಬಿ, ಮೊಲದಕೋಡ ಬಿಲ್ವಿಡಿದು ಬರುತ್ತಿರ್ಪುದಂ, ಪುಟ್ಟುಂಗುರುಡಂ ಅಂಧಕಾರದ ನಟ್ಟನಡು ವಿರುಳೊಳ್ ಕಂಡನೆಂಬಂತೆ ನಿಷ್ಫಲಂ, ಕ್ಲೇಶಂ, ದುರ್ಗತಿ ದುಃಖವೇ ಅಕ್ಕುಂ, ಆದೈವಂ ಪೆಜರ್ಗೀವುದುಂ ಕಾವುದುಂ ಅಂತಿರ್ಕೆ ತಮಗೆಂದು ಸಂಕಲ್ಪಿಸಿದ ವಸ್ತುವಂ ಕಾಯಲಾಜಿರ್."

ಧರ್ಮಪರೀಕ್ಷೆಯೆಂಬ ಇನ್ನೊಂದು ಗ್ರಂಥದಲ್ಲಿ ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ರುದ್ರರ ವಿಚಾರದಲ್ಲಿ ಇದ್ದ, ಇಲ್ಲದಿರುವ ಅನೇಕ ಕಥೆಗಳಿಗೆ ಅಪಾರ್ಥಗಳನ್ನು ಕಲ್ಪಿಸಿ ಅವರಿಂದ ಅನೇಕ ಪಾಶವೀಕೃತ್ಯಗಳನ್ನು ಮಾಡಿಸಿ ಅವರನ್ನು ಅಥಮಾಥಮ ರಾಕ್ಷಸರಾಗುವಂತೆ ಕವಿ ಚಿತ್ರಿಸಿದ್ದಾನೆ. ಇವೆಲ್ಲವನ್ನೂ ನೋಡಿದರೆ ಎರಡು ಮತದವರೂ ಎಷ್ಟು ದೂರ ಹೋಗುತ್ತಿದ್ದರೆಂಬುದು ವ್ಯಕ್ತವಾಗುತ್ತದೆ. ನಯಸೇನನಲ್ಲಿ ಈ ತರದ

1 ಪ್ರಾಕ್ಕಾವ್ಯಮಾಲಿಕೆಯಲ್ಲಿ ಈ ಗ್ರಂಥದಿಂದ ಕೆಲವು ಭಾಗಗಳನ್ನು ಉದ್ಧರಿಸಿದ್ದಾರೆ. ಪುಟ ೧೦೧.

ಮನೋವೃತ್ತಿಯಿಲ್ಲನೆಂಬುದು ಅತಿಪ್ರಿಯವಾದ ವಿಷಯ. ತನ್ನ ಮತಪ್ರಚಾರಕ್ಕೆ ಇತರ ಮತಗಳ ಅವಹೇಳನವೇನೂ ಅತ್ಯಾವಶ್ಯಕವಲ್ಲ; ಅದು ಒಂದು ವೇಳೆ ಅಡ್ಡಿಯಾದರೂ ಆಗಬಹುದು ಎಂಬುದನ್ನು ನಯಸೇನನು ಅರಿತಿದ್ದಂತೆ ಕಂಡು ಬರುತ್ತದೆ ಆದುದರಿಂದಲೇ ಅವನ ಕಾವ್ಯದಲ್ಲಿ ವೃತ್ತವಿಲಾಸ ಬ್ರಹ್ಮಶಿವರ ಹಾಗೆ ಒರಟೊರಟಾಗಿ ಆಡಿರುವ ಕಟೂಕ್ತಿಗಳು ಕಂಡುಬರುವುದಿಲ್ಲ.

ಈ ಪುಸ್ತಕದಲ್ಲಿ ಕೊಟ್ಟಿರುವ ಮೊದಲನೆಯ ಕಥೆಯಲ್ಲಿ ವೈದಿಕಮತವನ್ನು ವಿಡಂಬನ ಮಾಡಿರುವುದು ಕಂಡುಬರುತ್ತದೆ. ವೈದಿಕಜನದ ದುರಾಸೆಯನ್ನೂ, ದುರಭಿಮಾನವನ್ನೂ ಅಲ್ಲಿ ಕೆಣಕಿದ್ದಾನೆ. ತನ್ನ ಮತದ ಮಾರ್ಗವೇ ಮೇಲೆಂದು ಹೇಳಿದ್ದಾನೆ. ಆದರೆ ಹೇಳುವುದನ್ನು ಸೌಮ್ಯವಾಗಿ ಹೇಳಿದ್ದಾನೆ.

ಮತ್ತೊಂದು ಕಥೆಯಲ್ಲಿ ಒಬ್ಬ ಮಹಾರಾಣಿಯ ಸಮ್ಯಕ್ತ್ವವನ್ನು ಪರೀಕ್ಷಿಸುವುದಕ್ಕಾಗಿ ಒಬ್ಬ ಜೈನ ಸಂನ್ಯಾಸಿಯು ಬ್ರಹ್ಮ ವಿಷ್ಣು ರುದ್ರರ ವೇಷಗಳನ್ನು ಧರಿಸಿ ಅವಳ ಪಟ್ಟಣಕ್ಕೆ ಬರುತ್ತಾನೆ. ಜನರೆಲ್ಲರೂ ಬಂದು ಪೂಜಿಸಿ ಹೋದರೂ ರಾಣಿ ಅಲ್ಲಿಗೆ ಬರದೆ ತನ್ನ ದೃಢವಾದ ನಂಬಿಕೆಯನ್ನು ವ್ಯಕ್ತಪಡಿಸುತ್ತಾಳೆ. ಅಲ್ಲಿ ವೈದಿಕ ದೇವತೆಗಳನ್ನು ಅಣಕಿಸಿರುವುದು ಕಂಡುಬರುತ್ತದೆ.

ಕುಧರ್ಮಿಗೆ ಜೈನಮತವು ಕೋಪವನ್ನುಂಟುಮಾಡುತ್ತದೆ, ಆದರೆ ತಪ್ಪು ಅವನಲ್ಲಿಯೇ ಇದೆ ಎಂಬುದನ್ನು ಕವಿ ಹೇಳಿರುವ ರೀತಿಯಿದು.

ಕನ್ನಡಿಯಂ ತೋಱಿದೊಡೆ–ಅ
ತ್ಯುನ್ನತ ಸಲ್ಲಕ್ಷಣಂಗೆ ಮುನಿಸಾಗದು ಮ
ತ್ತೆನ್ನದೆ ಮೂಕೊಱೆ[1] ಯಂಗೆ ಆ
ಕನ್ನಡಿಯಂ ತೋಱೆ ಬಡಿವನ್–ಇಱಿವನ್–ಕೊಲ್ವಂ

ಇನ್ನೊಂದು ಕಡೆ ಲೋಕದ ಮೂರ್ಖತನವನ್ನು ಹಳಿಯು ವುದಕ್ಕಾಗಿ ವೈದಿಕ ಜನರ ಜೀವನದಿಂದ ಒಂದು ಉಪಮಾನ ವನ್ನು ತೆಗೆದುಕೊಂಡಿದ್ದಾನೆ "ಹೋಮಮಂ ಮಾಡುವ ಬ್ರಾಹ್ಮಣಂ ನೊಣವು ಬೆನ್ನನೂಱಿದೊಡೆ ಸೈರಿಸಲಾಱದೆ ಬೆನ್ನಂ ಪೊಯ್ದುಕೊಳ್ವುದುಂ ಕೆಲದೊಳಿರ್ದವರೆಲ್ಲಂ ಕೊಡನ ತುಪ್ಪದೊಳ್ ಕೈಯನದ್ದಿ ತಮ್ಮ ಬೆನ್ಗಳಂ ಪೊಯ್ದುಕೊಂಡ ರೆಂಬಂತೆ" ದೊಡ್ಡವರು ಮಾಡಿದ್ದನ್ನೇ ಮಾಡಲು ಜನರು ಹೇಗೆ ನುಗ್ಗುತ್ತಿದ್ದರೆಂಬುದನ್ನು ಹಾಸ್ಯ ಮಾಡಿರುವುದು ಇಲ್ಲಿ ಕಾಣುತ್ತದೆ.

ಸತ್ಯವ್ರತದ ಕಥೆಯನ್ನು ಹೇಳುತ್ತಾ ಬೌದ್ಧನೊಬ್ಬನ ಚಂಚಲತೆಯನ್ನು ವರ್ಣಿಸಿದ್ದಾನೆ. ಆತನು ಜೈನಧರ್ಮದ ಹಿರಿಮೆಯನ್ನು ಕೇಳಿ ಆ ಮತಕ್ಕೆ ಸೇರುತ್ತಾನೆ. ಆದರೆ ತನ್ನ ಗುರುಗಳು ಬಂದು ಬೆದರಿಸಲು ಮತ್ತೆ ತನ್ನ ಮತಕ್ಕೆ ಸೇರು ತ್ತಾನೆ. ಅಷ್ಟೇ ಅಲ್ಲದೆ ತಾನು ಮಾಡಿದ ಕಾರ್ಯವನ್ನು ಸಾಧಿಸು ವುದಕ್ಕಾಗಿ ಸುಳ್ಳನ್ನು ನುಡಿಯುತ್ತಾನೆ. ಆ ಸಂದರ್ಭದಲ್ಲಿ ಎರಡು ಉಪಮಾನಗಳ ಮೂಲಕ ಜೈನರಲ್ಲದವರು ಶ್ರೇಷ್ಠರಲ್ಲ ವೆಂಬ ಅಂಶವನ್ನು ಸೂಚಿಸಲು ಕವಿ ಪ್ರಯತ್ನಪಟ್ಟಿದ್ದಾನೆ.

"ಹೆಪ್ಪಿಟ್ಟೊಡೆ ಪಾಲ್ ಮೊಸರಾ
ಗಿಪ್ಪಂತಿರೆ ನೀರ್ಗಳಾಗಲಱಿಗುಮೆ?"

---

1 ಮೂಗಿಲ್ಲದವನು

"ಕಾಸಿದೊಡೆ ಬೆಣ್ಣೆ ತುಪ್ಪಂ
ಲೇಸಪ್ಪವೊಲೆಣ್ಣೆ ಕಾಸೆ ಘೃತಮಪ್ಪುದೇ?"

ಹೀಗೆ ಇತರ ಮತಗಳನ್ನು ನಯಸೇನನು ಹಳಿದರೂ ಎಲ್ಲಿಯೂ ತನ್ನ ಸೌಮ್ಯತೆಯನ್ನು ಬಿಟ್ಟಿಲ್ಲ. ಅವನ ಕಾವ್ಯ ಜನಪ್ರಿಯವಾಗುವುದಕ್ಕೆ ಇದೂ ಒಂದು ಕಾರಣ.

## ೮. ನಯಸೇನನ ಉಪಮಾನಗಳು

ನಯಸೇನನ ಕಾವ್ಯೋದ್ಯಾನದಲ್ಲಿ ಆತನ ಉಪಮಾನಗಳು ಬಹು ಸವಿಯಾದ ಹಣ್ಣುಗಳು. ಅವನ್ನು ಸವಿಯದೆ ಉದ್ಯಾನದ ಸುಖವನ್ನು ಎಷ್ಟು ಅನುಭವಿಸಿದರೂ ಅದು ಅಪೂರ್ಣ. ಜನ ಜೀವನವನ್ನು ತೀವ್ರವಾಗಿ ದೃಷ್ಟಿಸಿ ಲೋಕದ ಸುಖದುಃಖಗಳ ಅನಂತಮುಖಗಳನ್ನು ಆತನು ಅರಿತಿದ್ದನು. ಜೀವನದ ಪ್ರತಿಯೊಂದು ಮುಖದಲ್ಲಿಯೂ ಒಂದೊಂದು ಹೊಸ ಉಪಮಾನವು ಅವನಿಗೆ ಹೊಳೆಯುತ್ತಿದ್ದಿತು. ಇದು ಅವನ ಕಾವ್ಯದಿಂದ ವ್ಯಕ್ತವಾಗುತ್ತದೆ. ಇದಲ್ಲದೆ ಮತ್ತೊಂದು ಜಾಣ್ಮೆಯೂ ನಯಸೇನನಲ್ಲಿ ಕಂಡುಬರುತ್ತದೆ. ಒಂದೇ ವಿಷಯವನ್ನು ವರ್ಣಿಸುವುದಕ್ಕೆ ಅನೇಕ ಉಪಮಾನಗಳನ್ನು ಆತನು ಉಪಯೋಗಿಸುತ್ತಾನೆ. ಒಂದರ ಹಿಂದೊಂದು ಉಪಮಾನವು ಹೊಂದಿಕೊಂಡು ಬಂದು ಅನೇಕ ಮಣಿಗಳಿಂದ ಕೂಡಿದ ಏಕಾವಳಿಯಂತೆ ಮನೋಹರವಾಗಿರುತ್ತದೆ. ಉಪಮೇಯ ಅರ್ಥವನ್ನು ವಿವರಿಸುವುದಕ್ಕೆ ಒಂದು ಉಪಮಾನ ಸಾಲದಿದ್ದರೆ ಅದರ ಹಿಂದೆ ಮತ್ತೊಂದು ಸಿದ್ಧವಾಗಿದೆ. ಅಂತೂ ಕವಿಯ ಅರ್ಥ ಸ್ಫುಟವಾಗಿ ತಿಳಿಯುತ್ತದೆ. ಜನರು ತಮ್ಮ ನಿತ್ಯಜೀವನದಲ್ಲಿ ತಾವೇ ಕಂಡು ಮರೆತಿದ್ದ ಅನೇಕ ಸನ್ನಿವೇಶಗಳನ್ನು ಈ ಉಪಮಾನಗಳು ಜ್ಞಾಪಕಕ್ಕೆ ತರುತ್ತವೆ.

ಕೊಸಗಿನ ರಜಮಂ ಪೀರ್ದು—ಅ
ಟ್ಟಿಸಲಾಜಿದೆ ಮುಗುಟಿ[3] ತುಂಬಿಗಳ್—ಕಾಜುವುವೆಂ
ಬೆಸಕದಿನೊರ್ವಳ ಕುರುಳೊ
ಳ್ಪು ಶೋಭೆಯಿಂ ಚೆನ್ನಪೂಗಳೇನೊಪ್ಪಿದುವೋ

ಇಲ್ಲಿ ಸ್ತ್ರೀಯೊಬ್ಬಳು ಹೂಮುಡಿದಿದ್ದುದನ್ನು ಕವಿ ವರ್ಣಿಸಿದ್ದಾನೆ. ಕಪ್ಪಗಿದ್ದ ತುರುಬಿನ ಕೂದಲಿನಲ್ಲಿ ಬಿಳಿಯ ಹೂಗಳು ಸೊಗಸಿದವು. ಬೆಟ್ಟದಾವರೆಯ ಹೂವಿನ ಧೂಳಿಯನ್ನು ಸೇವಿಸಿದ ತುಂಬಿಗಳು ಅದನ್ನು ಅರಗಿಸಲಾರದೆ ಮತ್ತೆ ಹೊರಕ್ಕೆ ಹಾಕುತ್ತಿವೆಯೋ ಎನ್ನುವಂತೆ ಅದು ಸೊಗಸಿತು. ಇಲ್ಲಿ ಆ ಹೂವು ತುರುಬಿನಲ್ಲಿ ಅರ್ಧ ಮುಚ್ಚಿ ಅರ್ಧ ಹೊರಗಿದ್ದು ಅದರೊಂದಿಗೆ ಹೊಂದಿಕೊಂಡಿದ್ದ ಆ ದೃಶ್ಯವು ಮನೋಹರ ವಾಗಿದೆ. ಇದರ ಸ್ವಾರಸ್ಯವನ್ನು ವಿವರಿಸುವುದಕ್ಕಿಂತ ಹೆಚ್ಚಾಗಿ ಅನುಭವಿಸಬೇಕು.

ಅನೇಕ ಉಪಮಾನಗಳು ಒಟ್ಟಿಗೆ ಬರುವುದಕ್ಕೆ ಒಂದು ಉದಾಹರಣೆಯನ್ನು ಕೊಡಬಹುದು. ಒಬ್ಬ ಗುರುವಿನಲ್ಲಿ ಅನೇಕರು ಬಿಲ್ವಿದ್ಯೆಯನ್ನು ಕಲಿಯುತ್ತಿರುತ್ತಾರೆ. ಒಬ್ಬ ರಾಜ ಕುಮಾರನು ಅವರೆಲ್ಲರಿಗಿಂತಲೂ ಉತ್ತಮನಾಗಿರುತ್ತಾನೆ. ಅವನನ್ನು ಕಂಡರೆ ಇತರರಿಗೆ ಆಗುತ್ತಿರಲಿಲ್ಲ. ಆಗ ಗುರುವು ಒಂದು ಕಷ್ಟವಾದ ಕೆಲಸವನ್ನು ಎಲ್ಲರಿಗೂ ನಿಯಮಿಸುತ್ತಾನೆ. ಆ ಕೆಲಸವನ್ನು ಮಾಡಲಾರದ ಶಿಷ್ಯರು ಹೇಗಿದ್ದರೆಂಬುದು ಇಲ್ಲಿ ವರ್ಣಿತವಾಗಿದೆ.

"ಬಿರುದರೊಳ್ ತೊಡರ್ದ ಪಂದೆಯಂತೆ ಕುಂದಿ, ಸಂತತಿ ಯಿಲ್ಲದರ್ಥಪತಿಯಂತೆ ಮುಜುಗಿ, ಜವ್ವನೆಗಾಳ್ದನಾದ[1]ಮುದು ಪನಂತೆ ಪಲ್ಗಿಡಿಗಿಱಿದು, ರಾಹುವಿಂ ಪಿಡಿಪೆತ್ತ ಚಂದ್ರನಂತೆ ಮನದೊಳ್ ಕಂದಿ, ತೋರತೆನೆಯಂತೆ ತಲೆಯಂ ಬಾಗಿ ರ್ಪುದುಂ."

1 ಒಡೆಯ

ಇಲ್ಲಿ ಒಂದೊಂದು ಉಪಮಾನವೂ ಕವಿಯ ಅರ್ಥವನ್ನು ವಿವರಿಸುವುದಾದರೂ, ಕೊನೆಯ 'ತೋರತೆನೆಯಂತೆ ತಲೆವಾಗಿರ್ಪುದುಂ' ಎಂಬುದು ಒಟ್ಟು ಸನ್ನಿವೇಶವನ್ನು ಮನದಟ್ಟುವಂತೆ ಚಿತ್ರಿಸುತ್ತದೆ. ಇಂತಹ ಉಪಮಾನಗಳು ನಯಸೇನನಲ್ಲಿ ನೂರಾರು ಇವೆ.

ಜನಜೀವನದ ಸನ್ನಿವೇಶಗಳಿಂದ ನಯಸೇನನು ಹೇಗೆ ಉಪಮಾನಗಳನ್ನು ಹುಡುಕುತ್ತಿದ್ದನೆಂಬುದು ಆಶ್ಚರ್ಯಜನಕವಾಗಿದೆ. ರಾಜಕುಮಾರನೊಬ್ಬನು ಪ್ರಜೆಗಳಿಗೆ ಚಿತ್ರಹಿಂಸೆಯನ್ನು ಕೊಡುತ್ತಿರುತ್ತಾನೆ. ಆಗ ಜನರು ಹೀಗೆ ಮಾತಾಡಿಕೊಳ್ಳುತ್ತಾರೆ.

> ಸುತನೆಂದು ಮನ್ನಿಪಂ ಕ್ಷಿತಿ
> ಪತಿ ತುಪ್ಪದ ಕೊಡನ ಮೇಗಣ–ಇಲಿ–ಆತಂ

ತುಪ್ಪದ ಗಡಿಗೆಯ ಮೇಲಿರುವ ಇಲಿಯನ್ನು ಹೊಡೆದರೆ ಮಡಕೆ ಒಡೆದು ತುಪ್ಪ ಚೆಲ್ಲಿಹೋಗುತ್ತದೆ. ಹೊಡೆಯದೆ ಇದ್ದರೆ ಇಲಿಯೇ ತಿಂದು ಬಿಡುತ್ತದೆ. ಏನು ಮಾಡಬೇಕು ? ರಾಜನಿಗೆ ಪುತ್ರನ ಮೇಲಿನ ಪ್ರೇಮದಿಂದ ಅವನನ್ನು ಶಿಕ್ಷಿಸುವುದಕ್ಕೂ ಇಲ್ಲದೆ, ಸುಮ್ಮನಿರುವುದಕ್ಕೂ ಇಲ್ಲದೆ ತೊಂದರೆಯಾಗಿದೆ. ಇಂಥ ಅರ್ಥಗರ್ಭಿತವಾದ ಉಪಮಾನಗಳು ಧರ್ಮಾಮೃತದಲ್ಲಿ ಅನೇಕವಿವೆ. ಶಾಶ್ವತವಾದ ಜೈನಧರ್ಮವನ್ನು ಬಿಟ್ಟು ಮಿಕ್ಕ ಧರ್ಮಗಳನ್ನು ಸೇರುವುದು ಎಷ್ಟು ಅನುಚಿತವೆಂಬುದನ್ನು ಹೇಳುವುದಕ್ಕೆ "ಮೂರು ದಿನದ ಪಗರಣಕ್ಕೆ ಗಡ್ಡ ಮೀಸೆ ಮುಂಡೆಯುಂ ಬೋಳಿಸಿಕೊಳ್ವಂತೆ" ಎಂಬ ಉಪಮಾನವನ್ನು ಕವಿ ಕೊಟ್ಟಿದ್ದಾನೆ. ಗಡ್ಡ ಮೀಸೆ ಜುಟ್ಟುಗಳು ಗಂಡಸಿಗೆ ಶಾಶ್ವತವಾದುವು. ನಾಟಕದಲ್ಲಿ ಸ್ತ್ರೀ

ಪಾತ್ರವನ್ನು ಧರಿಸುವುದಕ್ಕಾಗಿ—ಒಂದು ದಿನದ ಸೊಗಸಿಗಾಗಿ —ಅವೆಲ್ಲವನ್ನೂ ಬೋಳಿಸಿಕೊಳ್ಳುವುದು ಹೇಗೋ ಬೇರೆ ಧರ್ಮಗಳನ್ನು ಸೇವಿಸುವುದೂ ಹಾಗೆಯೇ.

ಜೈನಧರ್ಮದಲ್ಲಿ ನಂಬಿಕೆಯಿಲ್ಲದೆ ಮಾಡುವ ಕೆಲಸವು ವ್ಯರ್ಥವಾಗುತ್ತವೆಂಬುದನ್ನು ಸೂಚಿಸುವುದಕ್ಕೆ ಈ ಉಪಮಾನಗಳು—

"ದಾರಮಂ ಪೊಸೆಯದೆ ಮಣಿಯಂ ಕೋವಂತೆ"
"ಕೂಟಿಲ್ಲದೆ ಮದ್ದಳೆಯಂ ಬಡಿವಂತೆ"
"ಬಿದಿರೆಲೆಯಲ್ಲಿ ರಸಮನಜಿಸುವಂತೆ"

ತನ್ನ ಶಕ್ತಿಯನ್ನು ತಿಳಿಯದೆ ಕೆಲಸ ಮಾಡುವುದು ಹಾಸ್ಯಾಸ್ಪದವೆಂಬುದಕ್ಕೆ ಮತ್ತೆರಡು ಉಪಮಾನಗಳು—

"ಸೊಬಗೆಗೆ ಸವತಿಯಾದಳೆಂಬಂತೆ"
"ಜೋಯಿಸನ ಮಗಳು ಪಸೆಯಮೇಲೆ ರಂಡೆಯಾದಳೆಂಬಂತೆ"

ಮುನಿಗಳ ಸೇವೆಯನ್ನು ಹೇಗೆ ಮಾಡಬೇಕೆಂಬುದನ್ನು ಬೇರೆ ಕೆಲವು ಉಪಮಾನಗಳ ಮೂಲಕ ವಿವರಿಸುತ್ತಾನೆ.

"ಜೀವಿತಂ[1] ಗುಡದಾಳ್ದನ ಬೆಸಕ್ಕಂಜುವ ಬಂಟನಂತೆ ಮನದೊಳ್ ಜರಿಯದೆ"
"ಅಳಿಯನಂ ಕಂಡತ್ತೆಯಂತೆ ಲಜ್ಜಿಸದೆ"
"ಕೀಟಿಜ್ಞಾತಿಯಂ ಕಂಡ ಕುಲಜನಂತುದಾಸೀನಂಗೆಯ್ಯದೆ"

ಈ ಎಲ್ಲ ಉಪಮಾನಗಳಲ್ಲಿಯೂ ನಯಸೇನನ ಜೀವನಾನುಭವ ವ್ಯಕ್ತವಾಗಿದೆ. ಅವನ ದೃಷ್ಟಿ ಎಷ್ಟು ಸೂಕ್ಷ್ಮವಾದುದು, ಹೇಗೆ ಎಂತಹ ಸಣ್ಣ ವಿಷಯವನ್ನಾದರೂ ಸ್ವಾರಸ್ಯವಾಗಿ

1 ಕೂಲಿ

ಮಾಡಬಲ್ಲದು ಎಂಬುದು ಇವುಗಳಿಂದ ಚೆನ್ನಾಗಿ ಸೂಚಿತ ವಾಗುತ್ತದೆ. ನಯಸೇನನ ಉಪಮಾನಗಳ ವೈಶಿಷ್ಟ್ಯವು ಇಷ್ಟಕ್ಕೇ ಪೂರೈಸಲಿಲ್ಲ. ಅವನಲ್ಲಿ ಬರುವ ಎಷ್ಟೋ ಉಪಮಾನ ಗಳೂ ದೃಷ್ಟಾಂತಗಳೂ ಗಾದೆ ಮಾತಿನಂತಿವೆ. ಅವು ಜನರ ಬಾಯಿ ಮಾತಿನಲ್ಲಿ ಅಂದು ಬದುಕಿದ್ದಿರಬಹುದು. ಇವುಗಳನ್ನು ನೋಡಿ,

"ಮರುಳ ಪಯಣಕ್ಕೆ ತಱಿಗೆಲೆಯೆ ಸಂಗಡಿಗನೆಂಬಂತೆ"

"ಪೆಂಡಿರ ದೋಷಕ್ಕೆ ಮಕ್ಕಳ ಮೂಗಂ ಕೊಯ್ದರೆಂಬಂತೆ"

"ತ್ರಾಸಿನಕೊಡನೊಂದು ಬಿದ್ದೊಡೊಂದುಳಿದಪುದೇ ?"

"ಸೆಟ್ಟಿಯ ಮಾತೊಳ್ಳಿದುವು ಬಳ್ಳಂ ಕಿಱಿದು ಎಂಬಂತೆ"

"ಪ್ರೀತಿಯಾಕೆ ಓತಿಯಾದಳೆಂಬಂತೆ"

"ಕೊರಲ ಸತ್ವವಿಲ್ಲದೆ ಒರಲಂ ನುಂಗಿದರೆಂಬಂತೆ"

"ಗಡ್ಡಂಬಾರದೆ ಅಂದವಿಡುವೆನೆಂಬಂತೆ"

ಈ ಮಾತುಗಳಲ್ಲಿ ಅಡಗಿರುವ ಹಾಸ್ಯಪ್ರವೃತ್ತಿ ಗೋಚರ ವಾಗುವುದು ಕಷ್ಟವೇನೂ ಅಲ್ಲ. ಇವುಗಳಿಂದ ನಯಸೇನನ ವ್ಯಕ್ತಿತ್ವವೂ ಸ್ವಲ್ಪಮಟ್ಟಿಗೆ ಗೊತ್ತಾಗುತ್ತದೆ. ಅವನಿಗೆ ತನ್ನ ಧರ್ಮದಲ್ಲಿ ಉತ್ಕಟವಾದ ಅಭಿಮಾನವಿತ್ತು. ಆದರೆ ಅದು ದುರಭಿಮಾನವಾಗಿರಲಿಲ್ಲ. ಅವನಿಗೆ ಇತರ ಮತೀಯರನ್ನು ಜೈನರನ್ನಾಗಿ ಮಾಡಬೇಕೆಂಬ ಆಸೆ ಎಷ್ಟು ಇದ್ದಿತೋ ಅಷ್ಟೇ ಆಸೆ ತನ್ನ ಮತದವರ ರೀತಿನೀತಿಗಳನ್ನು ತಿದ್ದುವುದರಲ್ಲಿಯೂ ಇದ್ದುದು ಚೆನ್ನಾಗಿ ಗೊತ್ತಾಗುತ್ತದೆ. ಜೀವನವನ್ನು ನಿಟ್ಟಿಸಿ ಅದರಿಂದ ಬುದ್ಧಿ ಕಲಿಯುವ ಆಸಕ್ತಿ ಆತನಲ್ಲಿದ್ದಿತು. ಆತನು ಧರ್ಮಾಭಿಮಾನಿಯೂ ನ್ಯಾಯಪಕ್ಷಪಾತಿಯೂ ಆಗಿದ್ದ ನೆಂಬುದರಲ್ಲಿ ಸಂದೇಹವಿಲ್ಲ.

ಒಟ್ಟಿನಲ್ಲಿ ಹೇಳುವುದಾದರೆ ಧರ್ಮಾಮೃತದಲ್ಲಿ[1] "ಎಲ್ಲೆಲ್ಲಿ ನೋಡಿದರೂ ಉಪಮೆ; ಸರಪಣಿಯಂತೆ ಸಾಲುಹಿಡಿದು ಬರುವ ಉಪಮೆ; ಪ್ರತಿಯೊಬ್ಬನೂ ತನ್ನ ಸುತ್ತಮುತ್ತಿನ ದೈನಂದಿನ ಪ್ರಪಂಚದಲ್ಲಿ ನೋಡಿರಬಹುದಾದ ಸಂಗತಿಗಳ ಸಾದೃಶ್ಯ; ಎಲ್ಲರ ಬಾಯಲ್ಲಿಯೂ ಇದ್ದಿರಬಹುದಾದ ಗಾದೆಗಳು, ಸಾಮತಿಗಳು, ಇವು ಹೆಚ್ಚಾಗಿಯೇ ಇರುವುದರಿಂದ ಒಂದು ವಿಧವಾದ ಚಮತ್ಕಾರರಾಹಿತ್ಯವೂ ನೀರಸತೆಯೂ ಅನವೀಕೃತತ್ವವೂ ಪಂಡಿತರಾದವರಿಗೆ ತೋರಬಹುದು. ಆದರೆ ಸಾಮಾನ್ಯ ಜನರಿಗೆ ಇವು ಮನಸ್ಸಿಗೆ ಹಿಡಿಯುವಷ್ಟು ಕಾವ್ಯದ ಚಮತ್ಕಾರವಿಶೇಷಗಳೂ, ಅಲಂಕಾರವೈಚಿತ್ರ್ಯಗಳೂ ಹಿಡಿಯುವುದಿಲ್ಲ. ಆದ್ದರಿಂದಲೇ ಈ ಗ್ರಂಥವು ಕುಮಾರವ್ಯಾಸ ಭಾರತ, ತೊರವೆಯ ರಾಮಾಯಣ ಮುಂತಾದ ಗ್ರಂಥಗಳಂತೆ ಜನಸಾಮಾನ್ಯರಂಜಕವಾಗಿದ್ದಂತೆ ತೋರುತ್ತದೆ. ಇವುಗಳಲ್ಲಿ ಕಂಡುಬರುವ ಪಾಠಭೇದಗಳೂ, ಅಧಿಕ ಪಾಠಗಳೂ, ಪ್ರಕ್ಷೇಪಗಳೂ, ಈ ಗ್ರಂಥಗಳು ಜನರಲ್ಲಿ ಬಹಳವಾಗಿ ಬಳಕೆಯಲ್ಲಿದ್ದಿರಬೇಕೆಂಬುದಕ್ಕೆ ಸಾಕ್ಷಿಗಳಾಗಿವೆ."

---

1 ಧರ್ಮಾಮೃತದ ಉಪೋದ್ಘಾತ — ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳವರು.

## ೯. ಉಪಸಂಹಾರ

ಧರ್ಮಾಮೃತದ ಸಣ್ಣ ಸಣ್ಣ ಕಥೆ[1]ಗಳನ್ನು ಓದಿ ಅವುಗಳ ಸ್ವಾರಸ್ಯವನ್ನು ತಿಳಿದ ಮೇಲೆ ನಯಸೇನನಿಗೆ ಕನ್ನಡ ಸಾಹಿತ್ಯ ದಲ್ಲಿ ಯಾವ ಸ್ಥಾನವೆಂಬ ಪ್ರಶ್ನೆ ಏಳುತ್ತದೆ. ಕನ್ನಡ ಸಾಹಿತ್ಯದ ಪ್ರಥಮ ಶ್ರೇಣಿಯ ಕವಿಗಳಲ್ಲಿ ನಯಸೇನನೂ ಒಬ್ಬನೆಂದು ಹೇಳುವ ಧಾರ್ಷ್ಟ್ಯ ನಮಗಿಲ್ಲ. ಆದರೆ ಜನಸಾಮಾನ್ಯಕ್ಕೆ ಪ್ರಯೋಜನವಾಗುವ ಕಾವ್ಯ ಮಾರ್ಗವೊಂದನ್ನು ರೂಪುಗೊಳಿಸಿ ಕನ್ನಡ ಸಾಹಿತ್ಯವು ಜನಪ್ರಿಯವಾಗುವಂತೆ ಮಾಡಿದ ಕೆಲಸ ಇವನದು. ಜೈನ ತತ್ವಗಳನ್ನು ಸಾರುವುದು ಅವನ ಪರಮ ಧ್ಯೇಯ. ಅದನ್ನು ಸಾಧಿಸುವುದಕ್ಕೆ ಮಾರ್ಗ ಈ ಕಥನ ಮಾರ್ಗ. ನಯಸೇನನ ಮಾರ್ಗಕ್ಕೆ ಅವನೇ ಮಾದರಿ, ಮಾರ್ಗದರ್ಶಿ. ಕಥನ ರೀತಿಯಲ್ಲಿ ಸುಲಭಮಾರ್ಗವನ್ನನುಸರಿಸಿ,

---

1 ಧರ್ಮಾಮೃತದ ಕಥೆಗಳನ್ನು ಸಣ್ಣ ಕಥೆಗಳು ಎಂದು ಕರೆಯ ಬಹುದೇ ಎಂಬುದು ಒಂದು ಪ್ರಶ್ನೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ 'ಸಣ್ಣಕಥೆ'ಯೆಂಬುದು ಇಂಗ್ಲಿಷಿನ 'Short Story' ಎಂಬುದಕ್ಕೆ ಪ್ರತಿಯಾಗಿ ಉಪಯೋಗಿಸುತ್ತಿರುವ ಪದ ಈ ಸಂದರ್ಭದಲ್ಲಿ ಅದಕ್ಕೆ ಒಂದು ವಿಶಿಷ್ಟವಾದ ಅರ್ಥವಿದೆ, ಈ ಅರ್ಥದ ಪ್ರಕಾರ ಸಣ್ಣ ಕಥೆಯು ಒಂದು ಕಲಾಕೃತಿ. ಅದರಲ್ಲಿ ಒಂದು ವಿಧವಾದ ಸಂಪೂರ್ಣತೆ, ಐಕ್ಯ, ಕಮನೀಯತೆ ಇರುತ್ತವೆ. ಸಣ್ಣ ಕಥೆಯು ನಮಗೆ ಇಂಗ್ಲಿಷಿನಿಂದ ಬಂದಿತೆಂಬುದರಲ್ಲಿ ಸಂದೇಹವಿಲ್ಲ. ಅವು ನಮ್ಮಲ್ಲಿಯೇ ಹುಟ್ಟಿ ನಮ್ಮಲ್ಲಿಯೇ ಬೆಳೆಯಿತು ಎಂದು ಹೇಳಬಯಸುವ ಕೆಲವರು ನಯಸೇನನ ಈ ಕಥೆಗಳನ್ನು ಬೆರಳಿಟ್ಟು ತೋರಿಸುತ್ತಾರೆ. ಈ ಕಥೆಗಳು ಚಿಕ್ಕದಾಗಿವೆ ಎಂಬರ್ಥದಲ್ಲಿ ಮಾತ್ರ ಇವು ಸಣ್ಣ ಕಥೆಗಳು. ಆಧುನಿಕ ಸಾಹಿತ್ಯದ ಸಣ್ಣ ಕಥೆಗಳಿಗೂ ಇವಕ್ಕೂ ಯಾವ ಸಾಮ್ಯವೂ ಇಲ್ಲ. ಇವೆರಡರ ರೀತಿ ಬೇರೆ ಬೇರೆ.

ಜನಸಾಮಾನ್ಯರ ಹೃದಯವನ್ನು ಹಿಡಿದು, ತನ್ನ ಧ್ಯೇಯವನ್ನು ಸಾಧಿಸಿಕೊಂಡಿರುವ ಜಾಣ್ಮೆ ಮಹತ್ತರವಾದುದು. ಒಂದು ದೃಷ್ಟಿಯಿಂದ ನೋಡಿದರೆ ನಯಸೇನನನ್ನು ಹರಿಹರ ರಾಘವಾಂಕರಿಗೆ ಹೋಲಿಸಬಹುದು. ಹರಿಹರನು ರಗಳೆಗಳನ್ನೂ, ರಾಘವಾಂಕನು ಷಟ್ಪದಿಗಳನ್ನೂ ಮೊದಲು ಬರೆದಂತೆ ನಯಸೇನನು ಒಂದು ಹೊಸ ಮಾದರಿಯ ಕಾವ್ಯ ರಚನೆ ಮಾಡಿದನು. ಜನಸಾಮಾನ್ಯರ ಪ್ರತಿನಿಧಿಯಾಗಿ ಕವಿಗಳ ಮನಸ್ಸನ್ನು ಇತ್ತ ಕಡೆಗೆ ಸೆಳೆದನು. ಈ ಕಾರಣದಿಂದಲಾದರೂ ನಯಸೇನನ ಹೆಸರು ಕನ್ನಡ ಸಾಹಿತ್ಯವಿರುವ ತನಕ ಸುಸ್ಥಾಯಿಯಾಗಿರುತ್ತದೆಂಬುದು ಸತ್ಯವಾದ ಮಾತು.

ಕೆ.ಸಂ. ೨೭೯೧—ಎಂಯುಪಿಎಂ—೫೦೦೦ ಪ್ರತಿಗಳು—೨೬-೯-೯೫

೩೧. ಅಣ್ಣನ ಆದರ್ಶ—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ

೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—
ದೇವಂಗಿ ಟಿ. ಚಂದ್ರಶೇಖರ

೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ

೩೪. ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್

೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ

೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೩೭ ನಿಜಗುಣಶಿವಯೋಗಿ—ಎಚ್. ಗಂಗಾಧರನ್

೩೮. ಮುದ್ರಾರಾಕ್ಷಸ—ಡಾ. ಎನ್. ಎಸ್. ಅನಂತರಂಗಾಚಾರ್

೩೯. ರಾಘವಾಂಕ—ರಾಮೇಗೌಡ

೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ

೪೧. ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್

೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ

೪೩ ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ

೪೬. ಕವಿ ಶ್ರೀಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೪೭. ಕಬೀರದಾಸ—ಡಾ. ಹಿರಣ್ಮಯ

೪೮ ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ

೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ

೫೧. ಪೊನ್ನ—ಎಸ್. ಅನಂತರಂಗಾಚಾರ್

೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ

೫೩. ದೇವರ ದಾಸಿಮಯ್ಯ—ಕೆ. ಅನಂತರಾಮು

೫೪. ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ

೫೫. ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ

೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ

೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ

೫೮. ಭಾರತೀಯ ಮಹಿಳಾ ಪರಂಪರೆ—ಬಿ. ಪಿ. ಚಂದ್ರಾಬಾಯಿ

೫೯. ಬಂಧುವರ್ಮ—ಬಿ. ಎಸ್. ಸಣ್ಣಯ್ಯ

೬೦. ಶ್ರೀರಾಮಾಯಣದರ್ಶನಂ—ಒಂದು ಸಮೀಕ್ಷೆ—ಡಾ. ಸಿ. ಪಿ.
ಕೃಷ್ಣಕುಮಾರ್

೬೧. ದುರ್ಗಸಿಂಹ—ರಾಮೇಗೌಡ

೬೨. ಪಾಲ್ಕುರಿಕೆ ಸೋಮನಾಥ—ಡಾ. ಆರ್ವಿಯಸ್ ಸುಂದರಂ
೬೩. ಕನ್ನಡ ಸಾಹಿತ್ಯದ ಭಾಗವತ ಕವಿಗಳು—
ಬಿ. ಎಸ್. ವೇಣುಗೋಪಾಲ್
೬೪. ಕುಮಾರ ವಾಲ್ಮೀಕಿ—ಡಾ. ಹೊಸಬೆಟ್ಟು ಸೀತಾರಾಮ ಆಚಾರ್ಯ
೬೫. ಕವಿರಾಜ ಮಾರ್ಗ—ಸೀತಾರಾಮ ಜಾಗೀರ್‌ದಾರ್
೬೬. ಪಾರ್ಶ್ವ ಪಂಡಿತ—ಬಿ. ನಂ. ಚಂದ್ರಯ್ಯ
೬೭. ವೃತ್ತವಿಲಾಸ—ಡಾ. ಕೆ. ರಾಘವೇಂದ್ರರಾವ್
೬೮. ಅಗ್ಗಳದೇವ—ಎಚ್. ಎಸ್. ಕೃಷ್ಣಾಜೋಯಿಸ್
೬೯. ಕನಕದಾಸ—ಮಳಲಿ ವಸಂತಕುಮಾರ್
೭೦. ಶ್ರೀಪಾದರಾಜರು—ಡಾ. ಟಿ. ಎನ್. ನಾಗರತ್ನ
೭೧. ಸಿದ್ಧರಾಮ—ಡಾ. ಎಂ. ರಾಮಕೃಷ್ಣ
೭೨. ರನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೭೩. ಕನ್ನಡ ಕವಿಗಳು ಕಂಡ ಕ್ರೀಡೆಗಳು—ಡಾ. ಕೆ. ಶ್ರೀಕಂಠಯ್ಯ
೭೪. ಅಪರಾಧ ಪರಿಚಯ—ಆನಂದಮೂರ್ತಿ ಮಲಾಕಿ